

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೧ ಆಗಸ್ಟ್ ೨೦೦೫ ಸಂಚಿಕೆ ೮

ತುಮಕೂರಿನಲ್ಲಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಪತಂಜಲಿ ಯೋಗ ಶಿಕ್ಷಣ ರಜತ ಮಹೋತ್ಸವ ಸಮಾರಂಭವನ್ನು ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಅಂತರಾಷ್ಟ್ರೀಯ ಯೋಗಚಾರ್ಯ ಡಾ. ಬಿ.ಕೆ.ಎಸ್. ಅಯ್ಯಂಗಾರ್‌ರವರನ್ನು ಈ ಸನ್ಮಾನಿಸಲಾಯಿತು. ಶ್ರೀ ಸಿ.ವಿ. ಮಹದೇವಯ್ಯ, ಶ್ರೀ ಎ.ಆರ್. ಸ್ವಾಮಿ, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶ್ರೀ ತ್ರಿನೇತ್ರ ಮಹಂತಸ್ವಾಮೀಜಿ ಮುಂತಾದವರು ಉಪಸ್ಥಿತರಿದ್ದರು.

ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿಯವರು ಸಿದ್ಧಗಂಗಾ ಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಯವರ ಆಶೀರ್ವಾದ ಪಡೆದರು

ಶ್ರೀಮಠದ ಸನಿವಾಸ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆಯಲ್ಲಿ ಶಿಕ್ಷಣ ಸಚಿವ ಶ್ರೀ ಆರ್. ರಾಮಲಿಂಗರೆಡ್ಡಿ ಸ್ಥಳೀಯ ಶಾಸಕರು, ಪರಿಷತ್ ಸದಸ್ಯರು, ಮತ್ತು ತುಮಕೂರು ವಿ.ವಿ. ಉಪಕುಲಪತಿಗಳು ಹಾಜರಿದ್ದರು.

ಮಾಜಿ ಉಪಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಮಠಕ್ಕೆ ಭೇಟಿ ನೀಡಿದ್ದರು. ಮಾಜಿ ಸಚಿವ ಎಚ್.ಸಿ. ಮಹದೇವಪ್ಪ, ಶಾಸಕ ಬಿ.ಆರ್. ಪಾಟೀಲ್, ಡಾ. ಎಂ.ಆರ್. ಹುಲಿನಾಯ್ಕರ್ ಹಾಜರಿದ್ದರು

ಭೈರನಾಯಕನಹಳ್ಳಿಯಲ್ಲಿ ಅಂತರಾಷ್ಟ್ರೀಯ ವ್ಯಾಸಂಗ ವಸತಿ ಅನಾಥಾಲಯದ ಕಟ್ಟಡವನ್ನು ಪರಮಪೂಜ್ಯರು ಉದ್ಘಾಟಿಸಿದರು. ಸಚಿವ ಶ್ರೀ ಚೆನ್ನಿಗಪ್ಪ ಅವರೊಂದಿಗೆ ಅನೇಕ ಶಾಸಕರು ಹಾಜರಿದ್ದರು.

ಶ್ರೀ ಶ್ರೀಗಳವರ ನೇತೃತ್ವದಲ್ಲಿ ಎಂ.ಬಿ.ಎ. ಹೊಸ ವಿದ್ಯಾರ್ಥಿಗಳಿಗೆ ಸ್ವಾಗತ ಸಮಾರಂಭ. ಡಾ. ಎಂ.ಎನ್. ಚನ್ನಬಸಪ್ಪ, ನಿರ್ದೇಶಕ ಶ್ರೀ ಎಸ್. ಶಿವರಾಂ, ಪ್ರೊ. ರಮೇಶ್ ಉಪಸ್ಥಿತರಿದ್ದರು



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೧ ಆಗಸ್ಟ್ ೨೦೦೫ ಸಂಚಿಕೆ : ೮


## ಒಳಪುಟಗಳಲ್ಲಿ ..........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/- |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |




ಮುಖಪುಟ
ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಅವರು ತುಮಕೂರಿನಲ್ಲಿ ಶ್ರೀ ಪತಂಜಲಿ ಯೋಗ ಶಿಕ್ಷಣ ಸಮಿತಿಯ ರಜತಮಹೋತ್ಸವ ಸಮಾರಂಭವನ್ನು ಉದ್ಘಾಟಿಸಿ ಹಾಗೂ ಅಂತರರಾಷ್ಟ್ರೀಯ ಯೋಗಪಟು ಶ್ರೀ ಬಿ.ಕೆ.ಎಸ್. ಅಯ್ಯಂಗಾರ್ ರವರನ್ನು ಸನ್ಮಾನಿಸಿದರು.


ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – 572 104.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. 5, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – 560 054.
ದೂರವಾಣಿ : 23604087



## ''ಭಾರತ ನಾಣ್ಯದಲ್ಲಿ ಪ್ರಥಮ ಕನ್ನಡಿಗನಾಗಿ ಬಸವಣ್ಣ'' ....

ದಿನಾಂಕ ೬.೮.೨೦೦೫ರಂದು ಭಾರತ ಸರ್ಕಾರದ ಆರ್ಥಿಕ ಮಂತ್ರಿಗಳಾದ ಸನ್ಮಾನ್ಯ ಶ್ರೀ ಪಿ. ಚಿದಂಬರಂ ಅವರು 'ಬಸವ ನಾಣ್ಯ'ವನ್ನು ಟಂಕಿಸಿ ಚಲಾವಣೆಗೆ ನೀಡುವ ಐತಿಹಾಸಿಕ ಘೋಷಣೆಯನ್ನು ಬೆಂಗಳೂರಿನ ವಿದ್ವಾನ್ ಟಿ. ಚೌಡಯ್ಯ ಸ್ಮಾರಕ ಭವನದಲ್ಲಿ ನಡೆದ ಸಮಾರಂಭದಲ್ಲಿ ಮಾಡಿದರು. ಬಸವತತ್ವಾಭಿಮಾನಿಗಳಿಗೆಲ್ಲ ಇದು ಅತ್ಯಂತ ಸಂತೋಷವನ್ನುಂಟು ಮಾಡಿದೆ. ಇಂತಹ ಚರಿತ್ರಾತ್ಮಕ ಘೋಷಣೆಯನ್ನು ಮಾಡಿ ಕೋಟ್ಯಂತರ ಬಸವಾಭಿಮಾನಿಗಳ ಹಾಗೂ ಕನ್ನಡಿಗರ ಪ್ರೀತ್ಯಾದರಗಳಿಗೆ ಪಾತ್ರರಾದ ಶ್ರೀ ಚಿದಂಬರಂ ಅವರನ್ನು ಮತ್ತು ಘೋಷಣೆ ಮಾಡಲು ಆದೇಶ ನೀಡಿದ ವಿಶ್ವವಿಖ್ಯಾತ ಆರ್ಥಿಕ ತಜ್ಞರೂ, ರಾಷ್ಟ್ರದ ಪ್ರಧಾನಮಂತ್ರಿಗಳೂ ಆದ ಸನ್ಮಾನ್ಯ ಶ್ರೀ ಮನಮೋಹನ್‌ಸಿಂಗ್ ಅವರನ್ನು ಹಾಗೂ ರಾಜ್ಯ ಸರ್ಕಾರವನ್ನು, ತುಂಬು ಹೃದಯದಿಂದ 'ಸಿದ್ಧಗಂಗಾ' ಅಭಿನಂದಿಸಲು ಮತ್ತು ಕೃತಜ್ಞತೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

ಬಸವಣ್ಣನವರು ೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಬಿಜ್ಜಳರಾಜನಲ್ಲಿ ಅರ್ಥಮಂತ್ರಿಗಳಾಗಿದ್ದರು. ಅವರು ಮಾಡಿದ ಆರ್ಥಿಕ ಸುಧಾರಣೆ ಇನ್ನೂ ವಿಚಾರವಂತರ ಚಿಂತನವನ್ನು ಸಂವರ್ಧಿಸುತ್ತಲೇ ಇದೆ. ದುಡಿಮೆಗೆ ಪ್ರಾಶಸ್ತ್ಯ ನೀಡಿ, ಶ್ರಮಿಕ ಸಂಸ್ಕೃತಿಗೆ ಕಾರಣ ಪುರುಷರಾಗಿ, ಭಕ್ತಿ ಕಾಯಕ ದಾಸೋಹ ಸಮತಾ ತತ್ವಗಳನ್ನು ಸಮರ್ಥವಾಗಿ ಜನಮದಲ್ಲಿ ಬಿತ್ತಿ ಬೆಳೆದವರು ಬಸವಣ್ಣನವರು. ಮರ್ತ್ಯಲೋಕವನ್ನು ಕರ್ತಾರನ 'ಕಮ್ಮಟ'ವೆಂದು ಗೌರವಿಸಿದ ಜೀವನೋತ್ಸಾಹಿಗಳು. ಭಗವಂತನ ಸೃಷ್ಟಿಯಾದ ಇಹವನ್ನು ಟಂಕಸಾಲೆ- ನಾಣ್ಯಗಳನ್ನು ಮುದ್ರಿಸುವ ಕಾರ್ಯಾಗಾರವೆಂದು ಪರಿಭಾವಿಸಿದ ವರು. ಅಂತಹ ಪವಿತ್ರಾತ್ಮನನ್ನು, ಭಾರತ ಸರ್ಕಾರ 'ಬಸವ ನಾಣ್ಯ'ವನ್ನು ಹೊರತರುವ ಮಹತ್ವದ ಘೋಷಣೆಯನ್ನು ಆರ್ಥಿಕ ಮಂತ್ರಿಗಳಿಂದಲೇ ಮಾಡಿಸಿದ್ದು ಯೋಗಾಯೋಗವೆನಿಸಿದೆ.

ಈ ಮಹಾಪ್ರಯತ್ನದಲ್ಲಿ ಅಸಂಖ್ಯಾತ ಬಸವಾಭಿಮಾನಿಗಳು ಸಹಕರಿಸಿದ್ದಾರೆ. ಅವಿರತವಾಗಿ ಶ್ರಮಿಸಿದ್ದಾರೆ. ಸರ್ಕಾರದೊಡನೆ ವ್ಯವಹರಿಸಿದ್ದಾರೆ. ರಾಜ್ಯ ಮತ್ತು ಕೇಂದ್ರ ಸರ್ಕಾರದ ಅಧಿಕಾರಿಗಳಲ್ಲಿ ಸಮಾಲೋಚಿಸಿ ದ್ದಾರೆ. ವಿಶೇಷವಾಗಿ ಬೆಂಗಳೂರಿನ ಬಸವ ಸಮಿತಿಯು ಸ್ಮರಣೀಯ ಸೇವೆ ಸಲ್ಲಿಸಿದೆ. ಅದರಲ್ಲೂ ಭಾರತ ಸರ್ಕಾರದ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಮತ್ತು ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರ ಸೇವೆ ಮರೆಯಲಾರದಂತಹದು, ಅಭಿಮಾನ ಪೂರ್ಣವಾದುದು. ಇದು ಸಮಾಜಕ್ಕೆ ಅಭಿಮಾನವನ್ನುಂಟು ಮಾಡಿರುವ ಘಟನೆ. ಕನ್ನಡನಾಡಿಗೆ ಸಂದಿರುವ ಗೌರವ.

ಶ್ರೀ ಚಿದಂಬರಂ ಅವರು ಮಾತನಾಡುತ್ತ ಬಸವಣ್ಣನವರ ತತ್ವಗಳು ಇಂದಿಗೂ ಎಂದಿಗೂ ಪ್ರಸ್ತುತ, ಎಲ್ಲರಿಗೂ ಪ್ರಸ್ತುತ ಎನ್ನುವುದರ ಜೊತೆಗೆ ಆ ತತ್ವಗಳು Universal and eternal ಎಂದಿದ್ದು ಅರ್ಥಪೂರ್ಣ. ಮಿತಿಭಾಷಿಗಳೂ, ಸರಳ ಸಜ್ಜನಿಕೆಗೆ ಹೆಸರಾದವರೂ, ದಕ್ಷ ಆಡಳಿತಗಾರರೂ ಆದ ಶ್ರೀ ಚಿದಂಬರಂ ಬಸವತತ್ವ ಪ್ರೇಮಿಗಳ ಹೃದಯವನ್ನು ಈ ಮೂಲಕ ಗೆದ್ದಿದ್ದಾರೆ.

ಬರಲಿರುವ ಬಸವನಾಣ್ಯದಲ್ಲಿ ಹಿಂದಿ ಮತ್ತು ಇಂಗ್ಲೀಷ್ ಭಾಷೆಯಲ್ಲಿ ಶ್ರೀ ಬಸವೇಶ್ವರ ಎಂಬ ಅಂಕಿತವಿರುವುದರ ಜೊತೆಗೆ 'ಭಕ್ತಿ, ಕಾಯಕ, ದಾಸೋಹ - ಸಮತಾ' ತತ್ವಗಳ ಹೆಸರು ಮುದ್ರಿತವಾಗಿರುವುದರ ಜೊತೆಗೆ ಬಸವಣ್ಣನವರ ಚಿತ್ರವಿರುತ್ತದೆ.

ಭಾತರ ಸರ್ಕಾರದ ನಾಣ್ಯದಲ್ಲಿ ಪ್ರಥಮ ಕನ್ನಡಿಗನಾಗಿ ಮುದ್ರಣಗೊಳ್ಳಲಿರುವ ಬಸವಣ್ಣ ಸ್ವಾತಂತ್ರ್ಯೋತ್ಸವದ ಈ ಸಂದರ್ಭದಲ್ಲಿ ಎಲ್ಲರಿಗೆ ಶುಭವನ್ನುಂಟುಮಾಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಬಸವ ಪೀಠವು ಎದ್ದು, ಒಸೆದು ನಾಣ್ಯವು ಹುಟ್ಟಿ
ಬಸವನಾಮುದ್ರೆ, ಮೆರೆದಾವು । ಧರೆಯವಗೆ
ವಶವಾಗದಿಹುದೆ? ಸರ್ವಜ್ಞ.

– ಸಂಪಾದಕ







## ಗ್ರಾಮಾಂತರ ಬಸವ ಜಯಂತಿ

*ಶ್ರೀಮಠದ ಒಂದು ಸಾರ್ಥಕ ಹಾಗೂ ಪರಿಣಾಮದಾಯಕ ಯೋಜನೆ 'ಗ್ರಾಮಾಂತರ ಬಸವ ಜಯಂತಿ'ಯಾಗಿದೆ. ೧೯೭೯ ರಿಂದ ಪ್ರಾರಂಭವಾದ ಈ ಯೋಜನೆ ನಿರಂತರವಾಗಿ ನಡೆದುಬಂದಿದೆ. ಈವರೆಗೆ ೭೨ ಗ್ರಾಮಗಳಲ್ಲಿ ಆಚರಣೆಯನ್ನು ಮಾಡಿದ ತೃಪ್ತಿ ಯೋಜನೆಯದಾಗಿದೆ. ಯೋಜನೆಯ ಬಹುಮುಖ್ಯ ಅಂಗ. ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕದ ಪ್ರದರ್ಶನ. ನಾಟಕದ ತಂಡದಲ್ಲಿ ಒಂದುನೂರು ಮಂದಿ ಸೇವಾಶೀಲರಾಗಿದ್ದಾರೆ. ಶಿಕ್ಷಕರಿದ್ದಾರೆ, ವಿದ್ಯಾರ್ಥಿಗಳಿದ್ದಾರೆ. ನಾಟಕದ ಪ್ರದರ್ಶನದ ಅವಧಿ ಎಂಟರಿಂದ ಒಂಬತ್ತು ಘಂಟೆಗಳು. ರಾತ್ರಿ ಒಂಬತ್ತೂವರೆಗೆ ಪ್ರಾರಂಭವಾದರೆ ಬೆಳಗಿನ ಆರೂವರೆತನಕ ನಾಟಕ ಪ್ರದರ್ಶಿತವಾಗುತ್ತದೆ. ಗ್ರಾಮೀಣ ಜನತೆ ಸಿನಿಮಾ, ಟಿ.ವಿ.ಗಳ ಈ ಪ್ರಭಾವ ಕಾಲದಲ್ಲಿಯೂ ಭಕ್ತಿಯಿಂದ ನಾಟಕ ನೋಡಲು ಬರುತ್ತಾರೆ. ಬಸವ ಸಂದೇಶವನ್ನು ತಮ್ಮದಾಗಿಸಿಕೊಳ್ಳುವಲ್ಲಿ ಸಂತೋಷಿಸುತ್ತಾರೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸಮಾವೇಶಗೊಳ್ಳುತ್ತಾರೆ. ನಾಟಕ ಮುಗಿದ ಸಂದರ್ಭದಲ್ಲಿ ಬಸವಣ್ಣನ ಪಾತ್ರಧಾರಿಗೆ ಅನೇಕ ಮುಗ್ಧರು ನಮಿಸಿ, ಗೌರವಿಸಿ ಧನ್ಯರಾದೆವು ಎಂದುಕೊಳ್ಳುತ್ತಾರೆ. ನಮ್ಮಲ್ಲಿಗೆ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ತತ್ತ್ವವನ್ನು ಪರಿಚಯಿಸುವ ಯೋಜನೆ ಸಾರ್ಥಕವಾಗುತ್ತಿದೆ ಎನಿಸುತ್ತದೆ.*

*ನಾಟಕದಲ್ಲಿ ಭಾಗವಹಿಸುವ ಶಿಕ್ಷಕ, ವಿದ್ಯಾರ್ಥಿಗಳಿಗೆ ಇದರಿಂದ ಪ್ರಯೋಜನವಾಗಿದೆ. ಅವರಿಗೆ ಅರಿವಿಲ್ಲದಂತೆಯೇ ಅವರಲ್ಲಿರುವ ಕಲಾಶಕ್ತಿ ಉತ್ತೇಜಿತವಾಗುತ್ತದೆ. ಕೆಲವರು ಸಂಗೀತದಲ್ಲಿ ವಿದ್ವಾನರಾಗುವತ್ತ ಮುನ್ನಡೆಯುತ್ತಿದ್ದಾರೆ. ವಿದ್ಯಾರ್ಥಿಗಳಂತೂ ವಚನಗಳನ್ನು ಅನಾಯಾಸವಾಗಿ ಹೃದ್ಗತವಾಗಿಸಿಕೊಳ್ಳುತ್ತಿದ್ದಾರೆ. ಒಬ್ಬಿಬ್ಬರು ಇಡೀ ನಾಟಕದ ಎಲ್ಲ ಪಾತ್ರಗಳ 'ಮಾತು'ಗಳನ್ನು ಚಾಚು ತಪ್ಪದೆ ನೆನಪಿನಲ್ಲಿಟ್ಟುಕೊಂಡಿದ್ದಾರೆ. ನಾಟಕ ಪ್ರದರ್ಶಿತವಾಗುತ್ತಿರುವ ಸಂದರ್ಭದಲ್ಲಿ ರಾತ್ರಿಯೆಲ್ಲಾ ಕಣ್ಮುಚ್ಚದೆ ಕೆಲಸ ಕಾರ್ಯಗಳಲ್ಲಿ ತತ್ಪರರಾಗುವ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಸೇವೆ ಮರೆಯುವಂತಹುದಲ್ಲ. ಅವರೆಲ್ಲ ತಮ್ಮ ವೈಯಕ್ತಿಕ ತೊಂದರೆಗಳನ್ನು, ಸಾವು ನೋವುಗಳನ್ನು ಮನಸ್ಸಿಗೆ ತಂದುಕೊಳ್ಳದೆ ಈ ಯೋಜನೆಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ.*

*ಈ ಯೋಜನೆಯನ್ನು ಮೆಚ್ಚಿ ಬುದ್ಧಿಜೀವಿಗಳು, ಗಣ್ಯಾತಿಗಣ್ಯರು, ಅಭಿಮಾನಿಗಳು ಅನೇಕ ಸಂದರ್ಭಗಳಲ್ಲಿ ತಮ್ಮ ಸದ್ಭಾವನೆಗಳನ್ನು, ಸಲಹೆಗಳನ್ನು, ಬದಲಾವಣೆಗಳನ್ನು ವ್ಯಕ್ತಪಡಿಸುತ್ತ ಬಂದಿದ್ದಾರೆ. ಹಲವಾರು ಮಠಾಧಿಪತಿಗಳು ಸಹಕರಿಸುವಲ್ಲಿ ಯೋಜನೆಗೆ ಶಕ್ತಿ ತುಂಬುತ್ತಿದ್ದಾರೆ. ಇದೆಲ್ಲವನ್ನೂ ಮನಸ್ಸಿಗೆ ತಂದುಕೊಂಡಾಗ ''ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರಪೂಜನಂ'' ಎಂಬ ಮಾತು ನೆನಪಾಗುತ್ತದೆ.*

*

ಓಂ



# ಶ್ರೀ ಸಿದ್ಧಲಿಂಗೇಶ್ವರ ವಚನ

*ನಡುವಣ ಮಂಟಪದಲ್ಲಿ ಮೃಡಮೂರ್ತಿಯ ಕಂಡೆನಯ್ಯ*
*ಮೃಡನ ಗಡಣೆಯಲ್ಲಿ ಜಗವೆಲ್ಲಾ ಅಡಗಿ ಉಡುಗಿದೆ ನೋಡಾ*
*ಈ ಒಡೆಯನ ಮರಿಯೆಯನೇನೆಂಬೆನಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಸೂಕ್ಷ್ಮತನು ಮಧ್ಯದಲ್ಲಿ ಮನಸ್ಸೆಂಬ ಮಂಟಪ. ಅದರಲ್ಲಿ ಪ್ರಾಣಲಿಂಗ. ಜ್ಞಾನದ ಕಣ್ಣಿಗೆ ಶಿವಶರಣನು ಕಾಣಬರುತ್ತಾನೆ. ಆ ಪ್ರಾಣಲಿಂಗದ ಮಂತ್ರ, ಧ್ಯಾನ, ಪೂಜೆ, ಸ್ತೋತ್ರಗಳಲ್ಲಿ ಶರಣನ ದೇಹೇಂದ್ರಿಯಗಳೆಲ್ಲ, ವಿಷಯಕರಣಗಳೆಲ್ಲ ಗೋಪ್ಯವಾಗಿವೆ. ಹೀಗಿರುವ ಪ್ರಾಣಲಿಂಗದೇವನ ಘನತರವಾದ ಮಹಾತ್ಮೆಯನ್ನು ಉಪಮಿಸಲು ಬರದು ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀವಾಣಿ

ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ, ಶಕ್ತಿವತ್ತಾಗಬೇಕಾದರೆ ಜನರಲ್ಲಿರುವ ತಪ್ಪು ಕಲ್ಪನೆ ಭ್ರಮೆ ಹೋಗಬೇಕು. ಅವರ ಭ್ರಮೆ ಸ್ವಾತಂತ್ರ್ಯ ಕಾಮಧೇನು ಕಲ್ಪವೃಕ್ಷವಾಗಿ ಸಕಲ ಇಷ್ಟಾರ್ಥಗಳನ್ನೀಯುವ ಶಕ್ತಿ ಸ್ವಾತಂತ್ರ್ಯಕ್ಕಿರಬೇಕೆಂದು ಜನರ ತಪ್ಪು ಕಲ್ಪನೆ. ವಿದ್ಯಾರ್ಥಿಗಳು ಓದದೆ ರ‍್ಯಾಂಕು ಪಡೆಯಬೇಕು. ರೈತರು ಉತ್ತಮ ವ್ಯವಸಾಯ ಮಾಡದೆ ಹುಲುಸು ಬೆಳೆಯನ್ನು ಪಡೆಯಬೇಕು. ಬೆಸ್ತ, ಕಾರ್ಮಿಕರು, ಬಂಡವಾಳಗಾರರು, ಅಧಿಕಾರಿಗಳು – ಎಲ್ಲಾ ವರ್ಗದ ಜನರಿಗೂ ಕಷ್ಟಬೇಡ, ಬೆವರು ಸುರಿಸುವ ದುಡಿಮೆ ಬೇಡ, ಕರ್ತವ್ಯಬೇಡ, ಹಣಬೇಕು, ಫಲಬೇಕು. ಮೋಡಗಳಿಲ್ಲದೆ ಮಳೆ ಸುರಿಯಬೇಕು. ಈ ಕೀಳು ಮನೋಭಾವದ ಅಂಟು ಜಾಡ್ಯ ತೊಲಗದೆ ಹೊರತು ಸ್ವಾತಂತ್ರ್ಯದ ಸಾರ್ಥಕತೆ ಇಲ್ಲ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಜ್ಞಾನಯೋಗಿಯು ನೀನೆ ಕ್ರಿಯಾ ಯೋಗಿಯು ನೀನೆ
ಜ್ಞಾನ ಕ್ರಿಯೆಗಳ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿತ್ತ ನಿಶ್ಚಲ ಸೂರ್ಯ ನಿರ್ಮಲಯೋಗಿ ಶಿವ
ನಿತ್ಯ ನಿರಂಜನ ಶಿವತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದೆಲ್ಲ ಜ್ಞಾನಿಗಳ ತತ್ವ ಸಾರವಾದೆ
ಜಗದೆಲ್ಲ ಒಳಿತಿಗೆ ತಪಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಬಂಗಾರವೆ ಜೀವ ಮಾಣಿಕ್ಯವೆ
ಸೇವಾ ಸಿರಿಗಿರಿಯ ಮಹತಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಪಿಗೆಯೊಳು ಕಂಪಾಗಿ ಮಲ್ಲಿಗೆಯೊಳು ಮೃದುವಾಗಿ
ಮಾವಿನೊಳು ಮಧುರ ರಸವಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಪೂಜಾ ಸುಖಿಯೆ ಜಂಗಮ ದಾಸೋಹಿಯೆ
ಜಗವ ಮಂಗಳಗೈವ ಪುಣ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾಯಿ ಪ್ರೀತಿಯ ತೊರೆಯೆ ಪ್ರೇಮದ ಬಿಸಿಲೆ
ಹೂವು ಹಣ್ಣಾಗಿರುವ ಜಗದೊಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಾಳೆಯ ಸವಿಫಲವೆ ಹಲಸಿನ ಫಲ ಸಿಹಿಯೆ
ಜೇನಿನ ಮಧುರ ಬಹುಸವಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಿವ ಜಲವಾದೆ ಉರಿವ ಅಗ್ನಿಯಾದೆ
ಬೀಸುವ ತಂಗಾಳಿ ನೆಲ ಬಾನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೂಮಿ ತೂಕದ ಸಿರಿಯೆ ಬಿತ್ತರದಾಕಾಶವೆ
ಪಂಚಭೂತಗಳ ಪಾವನವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಧಾರ್ಮಿಕ ಕ್ರಾಂತಿ

ಭಾಗ – ೭

– ದೇಜಗೌ
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಾನವನನ್ನು ಈ ಗೊಂದಲದಿಂದ ಪಾರುಮಾಡಿ, ಅವನಿಗೆ ಉದ್ಧಾರದ, ಆತ್ಮಕಲ್ಯಾಣದ ದಾರಿಯನ್ನು ತೋರಿಸುವುದೇ ಬಸವಣ್ಣನವರ ಸತ್ಯಾನ್ವೇಷಣೆಯ ಗುರಿ. ಅವರು ಕಂಡುಕೊಂಡ ಸತ್ಯದಲ್ಲಿ ವೈಜ್ಞಾನಿಕ ದೃಷ್ಟಿಯಿದೆ, ವ್ಯವಹಾರಜ್ಞಾನದ ಪ್ರಾಯೋಗಿಕ ಶ್ರದ್ಧೆಯಿದೆ. ಅಸತ್ಯದ ಬೆಳಕಿನಲ್ಲಿ ಅಜ್ಞಾನ ಮರೆಯಾಗುತ್ತದೆ. ಗೊಂದಲ ಮಾಯವಾಗುತ್ತದೆ. ಅವರು ಬೋಧಿಸಿದ ಸತ್ಯ ವಾಸ್ತವವಾದುದರಿಂದ ಸರ್ವಗ್ರಾಹ್ಯವಾಗುತ್ತದೆ. ಸಂದೇಹ ವಿವಾದ ಗಳಿಗೆ ಅವಕಾಶವಿಲ್ಲದಂತೆ ಅವರದನ್ನು ಸ್ಫಟಿಕ ಸ್ಪಷ್ಟವಾಗಿ ನಿರೂಪಿಸುತ್ತಾರೆ. ಮರ್ತ್ಯಲೋಕ ಹೇಯವಾದದ್ದಲ್ಲ, ಇದೊಂದು ಪವಿತ್ರ ಯಾತ್ರಾಸ್ಥಳ, ಮಾನವ ಜನ್ಮ ನಿಕೃಷ್ಟವಲ್ಲ, ಅದೊಂದು ಶಿವಸಾಕ್ಷಾತ್ಕಾರದ ಮಾಧ್ಯಮ. ಆದ್ದರಿಂದ ಮನುಷ್ಯ ಕಾಯಕದ ಮೂಲಕ ಸತ್ಯಾನ್ವೇಷಣಾಸಕ್ತನಾಗಬೇಕೆನ್ನುವ ಸುವರ್ಣಮಾಧ್ಯಮ ಇತರ ಮತೀಯ ವ್ಯವಸ್ಥೆಯಲ್ಲಿ ಕಾಣದಿರುವಂಥದು.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣರೋ*
*ಸತ್ಯವ ನುಡಿವುದೇ ದೇವಲೋಕ ;*
*ಮಿಥ್ಯವ ನುಡಿವುದೇ ಮರ್ತ್ಯಲೋಕ*
*ಆಚಾರವೇ ಸ್ವರ್ಗ, ಅನಾಚಾರವೇ ನರಕ*
*ಕೂಡಲ ಸಂಗಮದೇವ, ನೀವೇ ಪ್ರಮಾಣು*

ಸ್ವರ್ಗ ನರಕಗಳ ಸ್ವರೂಪವನ್ನವರು ಮಾರ್ಮಿಕವಾಗಿ, ಧ್ವನಿಪೂರ್ವಕವಾಗಿ ನಿರೂಪಿಸಿದ್ದಾರೆ. 'ಈ ಲೋಕದೊಳಗೇ ಮತ್ತೆ ಅನಂತಲೋಕ' ಎನ್ನುವಲ್ಲಿಯೂ ಮರ್ತ್ಯಲೋಕದ ಮಹಿಮೆ ಪ್ರಕಟಗೊಳ್ಳುತ್ತದೆ.

ಜೀವನ ಶ್ರದ್ಧೆಯ ಆವಶ್ಯಕತೆ ಬಸವಣ್ಣನವರ ಉಪದೇಶದ ಜೀವನಾಡಿಯಾಗಿರುವುದರಿಂದಲೇ ಅವರ ದೃಷ್ಟಿಯಲ್ಲಿ ಮರ್ತ್ಯ ಮಾನವನ ಸಕಲ ಸಾಧನೆಗಳ ಕೇಂದ್ರವಾಗಿದೆ. ಅವರು ಸ್ವರ್ಗ ನರಕಗಳನ್ನು ಮರ್ತ್ಯದಲ್ಲಿಯೇ ಕಾಣಲೆಳಸಿರುವುದು ಅವರ ವಾಸ್ತವ ದೃಷ್ಟಿಗೂ ಪ್ರಾಮಾಣಿಕತೆಗೂ ಸಾಕ್ಷಿಯಾಗಿದೆ. ಆಧ್ಯಾತ್ಮ ಸಾಧನೆಯ ದೃಷ್ಟಿಯಿಂದಲೂ ದೇಹ ಮತ್ತು ಧರೆಗಳನ್ನು ತಿರಸ್ಕರಿಸುವಂತಿಲ್ಲ. ಇಲ್ಲಿದ್ದುಕೊಂಡೇ ಅವನು ಪಾಶವಿಕತೆಯಿಂದ ದೈವತ್ವದ ಕಡೆಗೆ, ಸಾಂತತೆಯಿಂದ ಅನಂತತೆಯ ಕಡೆಗೆ ಹೊರಳಬೇಕಾಗಿದೆ. ಆತ್ಮ ಸಾಕ್ಷಾತ್ಕಾರವೇ ಸ್ವರ್ಗವೆನ್ನುವ ಪಕ್ಷಕ್ಕೆ ಅದನ್ನಿಲ್ಲಿಯೇ ಗಳಿಸಬೇಕಷ್ಟೆ.

*ಇಹ ಚೇತ್ ಅವೇದೀತ್ ಅಥ ಸತ್ಯಂ ಅಸ್ತಿ*
*ನಚೇತ್ ಇಹಾವೇದೀತ್ ಮಹತೀ ವಿನಷ್ಟಿ ;*
*ಭೂತೇಷು ಭೂತೇಷು ವಿಚಿತ್ಯಧೀರಾಃ*
*ಪ್ರೇತ್ಯಾಸ್ಮಾತ್ ಲೋಕಾತ್ ಅಮೃತಾಭವಂತಿ*

(ಕಠೋಪನಿಷತ್ತು ೨-೫)

ಆದ್ದರಿಂದ ಆತ್ಮ ತತ್ವದ ಅರಿವಿಗೆ ಭೂಮಿಯೇ ನೆಲೆಯಾಗ ಬೇಕು. ಹಾಗೆಯೇ ಸೆಲೆಯಾಗಬೇಕೆನ್ನುವ ಸತ್ಯ ಮೇಲಣ ವಚನ ದಿಂದ ಹೊರಪಡುತ್ತದೆ.

ಸತ್ಯವೇ ಬಸವಣ್ಣನವರ ದೇವರು ; ಕಂಡದ್ದನ್ನು ಕಂಡಂತೆ ಹೇಳುವುದೇ ಅವರ ಸ್ವಭಾವ. ತಮ್ಮ ಅನುಭಾವಕ್ಕೆ ನಿಲುಕದಿದ್ದುದರ ಬಗ್ಗೆ ಅವರು ಮೌನ ತಾಳುತ್ತಾರೆ. ಸ್ವರ್ಗಲೋಕವನ್ನು ಕಂಡವರಿಲ್ಲವಷ್ಟೆ, ಆದರೂ ಅದರ ಅಸ್ತಿತ್ವದ ಸಾಧ್ಯತೆಯಿರುವುದಾದರೆ, 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ' ಎಂಬ ಒಂದು ಮಾತಿನಲ್ಲಿ ಆ ವಿಷಯದ ಬಗ್ಗೆ ಏಳಬಹುದಾದ ಸಂದೇಹಗಳನ್ನೆಲ್ಲ ನಿವಾರಿಸುತ್ತಾರೆ.

ಲಿಂಗಪೂಜೆ ಸನಾತನವಾದುದಾದರೂ, ಇಷ್ಟಲಿಂಗಧಾರಣೆ ವೀರಶೈವ ಧರ್ಮದೊಂದಿಗೆ ಪ್ರಾರಂಭವಾದದ್ದು. ಜನಿವಾರದ ಲಾಂಛನವನ್ನು ಬಹಿಷ್ಕರಿಸಿದ ಬಸವಣ್ಣನವರು ಲಿಂಗ ಲಾಂಛನಕ್ಕೆ ಸೋತದ್ದು ಸರಿಯೆ ಎಂಬ ಜಿಜ್ಞಾಸುಗಳು ಮನಸ್ಸಿನಲ್ಲೇಳುವುದು ಸಹಜ. ಚಿತ್ತೈಕಾಗ್ರತೆಗೆ ಚಿಹ್ನೆಯೊಂದು ಅವಶ್ಯಕವೆಂದು ತೋರಿರಬಹುದಾದರೂ ಅದೇ ಮುಖ್ಯವೆಂದು ಬಸವಣ್ಣನವರು ಗಣಿಸಿದಂತಿಲ್ಲ. 'ಉಂಬ ಜಂಗಮ ಬಂದರೆ ನಡೆಯೆಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ'; 'ಎರೆದರೆ ನೆನೆಯದು, ಮರೆದರೆ ಬಾಡದು ; ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ' ಎಂಬ ಮಾತುಗಳು ಅದರ ಬಗೆಗಿನ ಅವರ ಸಂದೇಹವನ್ನು ಬಯಲುಗೊಳಿಸುತ್ತವೆ. ಸುರೆಯನ್ನು ಹೀರುವ ಮಾಂಸವನ್ನು ತಿನ್ನುವ ಸುಳ್ಳು ಹೇಳುವ, ಕಳ್ಳತನ ಮಾಡುವ ಲಿಂಗಧಾರಕರು. ಆಗಿನ ಕಾಲದಲ್ಲಿಯೂ ಅವರ ಗಮನಕ್ಕೆ ಬಂದಿರಬೇಕು ; ಆ ಬಗ್ಗೆ ಜಿಹಾಸೆಯೂ ಮೂಡಿರಬೇಕು. ಒಮ್ಮೊಮ್ಮೆ ಅವರ ಬಗ್ಗೆಯೂ ಅವರು ಮರುಕ ತೋರಿರಬೇಕು. 'ಎಡದ ಕೈಯಲಿ ಕತ್ತಿ, ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ ; ಕೊರಳಲಿ ದೇವರಿರಲಿ, ಅವರ ಲಿಂಗನೆಂಬೆ, ಸಂಗನೆಂಬೆ' ಎಂದು ನುಡಿದದ್ದೂ ಉಂಟು. ಆದರೆ ಲಿಂಗಧಾರಣೆಯ ವಿಷಯದಲ್ಲಿ ಬಸವಣ್ಣನವರ ದೃಷ್ಟಿಯೇ ಬೇರೆ. ನಿರಾಕಾರ ಪೂಜೆ ಸಾಧ್ಯವಾಗದವರಿಗೆ ಸಾಕಾರರೂಪದ ಸಂಕೇತ ಅವಶ್ಯವಾಗಿ ಕಂಡಿರಬೇಕು. ನಾನಾ ಕುಲಗಳನ್ನೊಟ್ಟುಮಾಡಲು,

ಜಾತೀಯತೆಯನ್ನಳಿಸಲು, ಸಮಾನತೆ ಸ್ವಾತಂತ್ರ್ಯ ಸೋದರತೆಗಳ ಆಧಾರದ ಮೇಲೆ ನೂತನ ಸಮಾಜವನ್ನು ರೂಪಿಸಲು, ಭಾವೈಕ್ಯವನ್ನು ಸಾಧಿಸಲು ಭವಿಗಳಿಂದ ಶರಣರನ್ನು ಬೇರ್ಪಡಿಸಲು ಅಂಥದೊಂದು ಸಾಧನ ಆ ಕಾಲಕ್ಕೆ ಅತ್ಯಗತ್ಯವೆಂದು ತೋರಿರಬೇಕು.

ಆ ಲಿಂಗವಾದರೂ ಮೂತಿ ಮೂಗು ಕೈ ಕಿವಿ ಕಾಲುಗಳನ್ನುಳ್ಳ ಪ್ರಾಣಿಯ ಪ್ರತೀಕವೂ ಅಲ್ಲ, ವಿಗ್ರಹವೂ ಅಲ್ಲ. ನಿರಾಕಾರ ಸಾಕಾರಗಳೆರಡರ ಸಮನ್ವಯವನ್ನು ಸಾಧಿಸುವ, ವಿಶ್ವತತ್ವವನ್ನು ಪ್ರತಿಮಿಸುವ ಒಂದು ಶಕ್ತಿ ಮಾತ್ರಕೆ.

*ಜಗದಗಲ ಮುಗಿಲಗಳ ಮಿಗೆಯಗೆಲ ನಿಮ್ಮ ಗಲ;*
*ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ !*
*ಅಗಮ ಅಗೋಚರ ಅಪ್ರತಿಮ ಲಿಂಗವೆ, ಕೂಡಲ*
*ಸಂಗಮದೇವಯ್ಯಾ,*
*ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ !*

ವಿಗ್ರಹಕ್ಕೆ ನಾಮರೂಪಗಳುಂಟು, ಮಿತಿಪ್ರಮಾಣಗಳುಂಟು, ಕುಲಗೋತ್ರಗಳುಂಟು, ಲಿಂಗವಾದರೋ ಅವುಗಳಿಂದ ಅತೀತ. ಅದು ಮನ ಬಂದಾಗ ಪೂಜಿಸಿ, ಬೇಡವಾದಾಗ ಮೂಲೆಯಲ್ಲಿ ಬಿಸಾಡುವ ವಸ್ತುವಲ್ಲ. ಎಲ್ಲೆಲ್ಲಿಯೂ-ಯಾವಾಗಲೂ ಇರುವ, ವಿಶ್ವಶಕ್ತಿಯನ್ನು ನೆನಪಿಗೆ ತಂದುಕೊಡುವ, ಹೃತ್ಕೇಂದ್ರದಲ್ಲಿರುವ ಪರವಸ್ತುವಿನ ಧ್ಯಾನಕ್ಕೆ ಅನುವು ಮಾಡಿಕೊಡುವ, ಅವಸ್ಥಾತ್ರಯಗಳಲ್ಲಿಯೂ ಮಾರ್ಗದಪ್ಪದಂತೆ ಜಾಗೃತಗೊಳಿಸುವ, ಲಿಂಗಾಂಗ ಸಾಮರಸ್ಯ ಸಾಧನೆಗೆ ನೆರವಾಗುವ ಸಾಧನವಾಗಿ ಅದು ಸದಾ ಅಂಗಸಂಬಂಧಿಯಾಗಿರಬೇಕೆಂಬುದು ಶರಣರ ವಾದ.

ನಿಜ, ಅಂಗದ ಮೇಲೆ ಲಿಂಗ ಬಂದ ಬಳಿಕ ಮನುಷ್ಯ ಅರಿಷಡ್ವರ್ಗಗಳಿಂದ ದೂರವಾಗಿರಬೇಕು; ಯಾವಾಗಲೂ ಸತ್ಕರ್ಮನಿರತನಾಗಿರಬೇಕು; ಸರ್ವೋದಯದಲ್ಲಿ ಆಸಕ್ತಿ ವಹಿಸಬೇಕು. ಲಿಂಗಧಾರಿಯಾದವನಿಗೆ ಜಾತಿ ಕುಲ ಸೂತಕಗಳಿಲ್ಲ. ಇವನು ಕುಂಬಾರ, ಅವನು ಕುಂಚಟಿಗ, ಇವನು ಮಾದಿಗ ಎಂಬ ಭೇದವನ್ನು ಮರೆಯಬೇಕು. ಪಟ್ಟ ಕಟ್ಟಿದ ನಂತರ ಕುಂಬಾರನೂ ಕ್ಷತ್ರಿಯನಾಗುವಂತೆ, ಲಿಂಗ ಧರಿಸಿದ ಹೊಲೆಯನೂ ಲಿಂಗವಂತನಾಗುತ್ತಾನೆ, ಶಿವನವನಾಗುತ್ತಾನೆ. ಪರುಷ ಮುಟ್ಟಿದ ಬಳಿಕ ಕಬ್ಬಿಣನೂ ಚಿನ್ನವಾಗುವಂತೆ, ಲಿಂಗ ಮುಟ್ಟಿದ ಬಳಿಕ ಕುಲಹೀನನೂ ಶುದ್ಧನಾಗುತ್ತಾನೆ. 'ಎಂತಹನಾದರೇನು, ಲಿಂಗ ಮುಟ್ಟಿದವನೇ ಕೀಳು ಜಾತಿ' ಲಿಂಗ ಜಂಗಮ ಬೇರೆ ಬೇರೆಯಲ್ಲ. ನಡೆಲಿಂಗವೇ ಜಂಗಮ. 'ಲಿಂಗ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು' ಅಂದಮೇಲೆ ಲಿಂಗಪ್ರಸಾದಿಗಳಲ್ಲ ದವರ ಸಂಗ ಪಂಚಮಹಾಪಾತಕ' ವಾಗುತ್ತದೆ.

ಬಸವಣ್ಣನವರ ಉಪದೇಶವನ್ನು ಚಾಚೂ ತಪ್ಪದೆ ನಡೆಸುವುದಾದರೆ ಲಿಂಗದ ಮೂಲಕ ಲಿಂಗಯ್ಯನನ್ನು ಕಾಣಲು ಸಾಧ್ಯವಾಗುತ್ತದೆ. ಇಲ್ಲವಾದರೆ ಅದೊಂದು ವಂಚನೆಯ ಲಾಂಛನವಾಗುತ್ತದೆ. ಆದ್ದರಿಂದ 'ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ' ಎಂಬ ವಚನವನ್ನು ನಿರ್ದಿಷ್ಟಮತದ ಕಟ್ಟುಪಾಡಿಗೊಳಗಾದವರಿಗೆ ಮಾತ್ರ ಅನ್ವಯಿಸಬೇಕಾಗುತ್ತದೆ. ಏಕೆಂದರೆ ಲಿಂಗಧಾರಣೆಯಿಲ್ಲದೆಯೂ ಆತ್ಮಾನುಸಂಧಾನದಲ್ಲಿ ಯಶಸ್ವಿಯಾದ ಋಷಿ ಸಂತರ ಸಂಖ್ಯೆ ಕಡಿಮೆಯೇನಲ್ಲ. ಲಿಂಗಧಾರಣೆ ಮಾಡಿದನಂತರ ಅದನ್ನು ಶ್ರದ್ಧಾನಿಷ್ಠೆಗಳಿಂದ ಉಪಾಸಿಸದಿದ್ದರೆ ಅವನು ದೂಷ್ಯನಾಗುತ್ತಾನೆನ್ನುವುದನ್ನೂ, ಅಂತೆಯೇ ಅವನ ಹೊಣೆಗಾರಿಕೆ ಮಹತ್ತರವಾದುದೆನ್ನುವುದನ್ನೂ ಬಸವಣ್ಣನವರು ನಾನಾ ರೀತಿಯಲ್ಲಿ ಒತ್ತಿ ಹೇಳುತ್ತಾರೆ.

*ಅಂಗೈಯೊಳಗಣ ಲಿಂಗವ ನೋಡುತ್ತ*
*ಕಂಗಳು ಕಡೆಗೋಡಿವರಿವುತ್ತ ಸುರಿಯುತ್ತ ಎಂದಿಪ್ಪೆನೋ*
*ನೋಟವೇ ಪ್ರಾಣವಾಗಿ ಎಂದಿಪ್ಪೆನೊ ?*
*ಕೂಟವೇ ಪ್ರಾಣವಾಗಿ ಎಂದಿಪ್ಪೆನೋ*
*ಎನ್ನಂಗ ವಿಕಾರದ ಸಂಗವಳಿದು,*
*ಕೂಡಲ ಸಂಗಯ್ಯಾ 'ಲಿಂಗಯ್ಯಾ ಲಿಂಗ ಲಿಂಗ ಲಿಂಗ'ವೆನ್ನುತ್ತ ?*

ಹೀಗೆ ಕರಸ್ಥಲದ ಲಿಂಗದಲ್ಲಿ ಅಪ್ರತಿಮ ಲಿಂಗಯ್ಯನನ್ನು ಕಾಣುವ ಶರಣ ಮೇದಿನೀ ಪೂಜ್ಯನಾಗುತ್ತಾನೆ ; ನದಿಯಲ್ಲಿ ನದಿ ಬೆರಸಿದಂತೆ ಅವನು ಸಮರತಿ ಸಮಕಳೆಯನ್ನು ಸಾಧಿಸುತ್ತಾನೆ.

ವಾಸ್ತವವಾಗಿ ಶರಣ ಎನ್ನುವ ಪದ ಜಾತಿಮತ ಸೂಚಕವಾದುದಲ್ಲ. ಭಗವಂತನನ್ನು ಮರೆಹೊಕ್ಕವನೇ ಶರಣ. ಆ ಪದಕ್ಕೆ ಬಸವಣ್ಣನವರು ಕಲ್ಪಿಸಿರುವ ಅರ್ಥ ಪರಮೋಚ್ಚವಾದದ್ದು . 'ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ' ಅವರು ಶರಣರ ಬರವನ್ನು ಹಾರೈಸುತ್ತಾರೆ; 'ಅಂಗೈತಿಂದುದೆನ್ನ, ಕಂಗಳು ಕೆತ್ತಿಹುವಯ್ಯಾ, ಬಂದರಯ್ಯಾ ಶರಣರೆನ್ನ ಮನೆಗೆ' ಎಂದವರು ಭಾವಾವೇಶದಿಂದ ವಿದುರನಂತೆ ಕುಣಿದಾಡುತ್ತಾರೆ; 'ಲಿಂಗವ ಪೂಜಿಸುತ್ತ ಜಂಗಮದ ಮುಖ ನೋಡುತ್ತಿ'ರುವುದೇ ಅವರಿಗೆ ಪರಮ ಸುಖ ; ಶರಣರು ಬಂದು ಬಾಗಿಲ ಮುಂದೆ ನಿಂತು 'ಶಿವಾ' ಎಂದರೆ ಅವರು ಆನಂದದಿಂದ ಮೈಮರೆಯುತ್ತಾರೆ. 'ಕೂಡಲ ಸಂಗಮನ ಶರಣರು ಬಾರದಿದ್ದರೆ ಅಟ್ಟುವೆನೆನ್ನ ಪ್ರಾಣವನ್ನು' ಎಂದವರು ಶರಣರು ಬರುತ್ತೇವೆಂದು ಹೇಳಿ ಬರದಿದ್ದಾಗ ತಳಮಳಿಸುತ್ತಾರೆ. 'ಕೂಡಲ ಸಂಗನ ಶರಣರ ಮನ ನೊಂದರೆ ಆನು ಬೆಂದೆನಯ್ಯ' ಕೂಡಲ ಸಂಗನ ಶರಣನಗಲುವ ಧಾವತಿಯಿಂದ ಮರಣವೇ ಲೇಸು ಕಂಡಯ್ಯಾ' ಎಂದು ಯಾರನ್ನು ಕುರಿತು ಬಸವಣ್ಣ ಪರಿಪರಿಯಾಗಿ ಹಲಬುತ್ತಾರೆಯೋ ಅಂಥ ಶರಣರು ಸಾಮಾನ್ಯರಲ್ಲ. ಅವರು ಸ್ವತಂತ್ರಧೀರರು. ಬಯಲ ರೂಪ ಮಾಡಬಲ್ಲಾತನೇ ಶರಣ. ಪರಮೇಶ್ವರ ಸಹ ಶರಣರ ಮನದ ಕೊನೆಯ ಮೊನೆಯ ಮೇಲಡಗಿರುವುದರಿಂದ ಅವನೇ ಶಿವನಿಗಿಂತ ಶ್ರೇಷ್ಠ.

*ಶರಣ ನಿದ್ರೆಗೆಯ್ದರೆ ಜಪ, ಕಾಣರೋ,*
*ಶರಣನೆದ್ದು ಕುಳಿತರೆ ಶಿವರಾತ್ರಿ, ಕಾಣರೋ ;*
*ಶರಣ ನಡೆದುದೆ ಪಾವನ, ಕಾಣರೋ,*
*ಶರಣ ನುಡಿದುದೆ ಶಿವತತ್ವ, ಕಾಣರೋ !*
*ಕೂಡಲ ಸಂಗನ ಶರಣನ ಕಾಯವೇ ಕೈಲಾಸ, ಕಾಣರೋ !*





ಇಂಥವರು ಲಕ್ಷಕೊಬ್ಬ ಸಿಕ್ಕಿದರೂ ಬಸವಣ್ಣನವರ ಆತ್ಮಕ್ಕೆ ತೃಪ್ತಿಯಾದೀತು, ಅವರು ನಿಂತ ನೆಲ ಪಾವನವಾದೀತು.

ಜಂಗಮು ಶರಣನಿಗಿಂತ ಬೇರೆಯಲ್ಲ. ಅವನು ಸ್ಥಲಲಿಂಗ. 'ಲಿಂಗದಲ್ಲಿ ದಿಟವನರಸುವರೆ ಜಂಗಮವ ನಂಬುವುದು'. 'ಗುರುವಿನ ಗುರು ಜಂಗಮ' 'ಒಡಲಿಲ್ಲದಾತ ಜಂಗಮ, ಆಚಾರವೇ ಜಂಗಮ' ಎನ್ನುವಲ್ಲಿ ಅವನ ಆದರ್ಶ ಗುಣಗಳನ್ನೆತ್ತಿ ತೋರಿಸಲಾಗಿದೆ. ತನುವ ಕೊಟ್ಟು ಗುರುವನ್ನೂ, ಮನವ ಕೊಟ್ಟು ಲಿಂಗವನ್ನೂ, ಧನವ ಕೊಟ್ಟು ಜಂಗಮನನ್ನೂ ಒಲಿಸಿಕೊಳ್ಳದಿದ್ದರೆ ಕೂಡಲ ಸಂಗಯ್ಯ ಮೆಚ್ಚುವುದಿಲ್ಲ. ಅವನು ಐಹಿಕ ಐಶ್ವರ್ಯಕ್ಕೆ ಧರ್ಮದರ್ಶಿ ; ವ್ಯಷ್ಟಿ ಸಮಷ್ಟಿಗಳ ನಡುವಣ ಕೊಂಡಿ. ಸಮಾಜದಲ್ಲಿ ಸಮತೋಲವನ್ನು ಸಾಧಿಸುವ, ಭೇದಗಳನ್ನಳಿಸುವ, ಧರ್ಮವನ್ನು ಪೋಷಿಸುವ ವಿರಕ್ತ, ತ್ಯಾಗಿ. ಆದ್ದರಿಂದಲೇ ಜಂಗಮತತ್ವಕ್ಕೆ ಬಸವಣ್ಣನವರು ವಿಶೇಷ ಮಹತ್ವ ನೀಡುತ್ತಾರೆ.

ಅಷ್ಟಾವರಣ ಪಂಚಾಚಾರಗಳು ವೀರಶೈವ ಧರ್ಮವೆಂಬ ರಥದ ಚಕ್ರೇತರಾಂಗಗಳು. ಲಿಂಗ ಜಂಗಮಗಳ ತಾತ್ತ್ವಿಕ ಸ್ವರೂಪವನ್ನು ಮೇಲೆ ಕಾಣಿಸಲಾಗಿದೆ. ಸಾರಥಿ ರೂಪದ ಗುರುವಿಗೆ ಜಗತ್ತಿನ ಸಕಲ ಧರ್ಮಗಳೂ ಪ್ರಥಮ ಪ್ರಾಶಸ್ತ್ಯವನ್ನು ನೀಡಿವೆ. ಗುರುವಿಲ್ಲದ ಮಾನವನಿಗೆ ಗತಿಯೇ ಇಲ್ಲ. ಇಹಪರಗಳೆರಡಕ್ಕೂ ಅವನ ಮಾರ್ಗದರ್ಶನ ಅತ್ಯಂತಾವಶ್ಯಕ. ಪ್ರಾಚೀನ ಭಾರತೀಯ ಋಷಿಗಳು ಗುರು ಪರಮಾತ್ಮನ ಪ್ರತಿಬಿಂಬವೆಂದೇ ಕರೆದಿದ್ದಾರೆ. ತ್ರಿಮೂರ್ತಿಗಳ ಪ್ರತೀಕವೆಂದೇ ಸ್ತುತಿಸಿದ್ದಾರೆ. ಆ ಪರಂಪರೆಯಲ್ಲಿ ಬೆಳೆದ ಬಸವಣ್ಣನವರೂ 'ಶಿವಪಥವನರಿವಡೆ ಗುರುಪಥವೇ ಮೊದಲು' ಎಂದು ನುಡಿಯುತ್ತಾರೆ. ಆದರೆ ವಿಭೂತಿ ರುದ್ರಾಕ್ಷಿ ಪಾದೋದಕಾದಿ ಆವರಣಗಳ ಬಗೆಗೆ ಆಧುನಿಕ ಮತಿ ಪ್ರತಿಕ್ರಿಯೆ ಪ್ರಕಟಿಸುವುದಾದರೆ ಆಶ್ಚರ್ಯವಿಲ್ಲ. ಇವು ಧರ್ಮದ ಪರಮ ಮೌಲ್ಯಗಳೆಂದು ಹೇಳಲಾಗದಿದ್ದರೂ, ಆಗಿನ ಕಾಲದ ಪರಿಸರದ ಹಿನ್ನೆಲೆಯಲ್ಲಿ, ನೂತನ ಧರ್ಮಸ್ಥಾಪನೆಯ ಮತ್ತು ಪ್ರಚಾರದ ದೃಷ್ಟಿಯಿಂದ ಅನಿವಾರ್ಯವೆಂಬಂತೆ ಬಸವಣ್ಣನವರಿಗೆ ತೋರಿರಬೇಕು. ಆದರೆ ಒಂದು ಮಾತು ಮಾತ್ರ ಸತ್ಯ; ಯಾವ ಕಾಲದಲ್ಲಿಯೇ ಆಗಲಿ, ಅವು ಪಾದೋದಕ ಹೊರತಾಗಿ, ಅನಿಷ್ಟಕಾರಕವಲ್ಲವೆಂದು ಹೇಳಬಹುದು.

ಒಟ್ಟಿನಲ್ಲಿ ಕಾಯಕದ ಗೌರವವನ್ನೆತ್ತಿ ಹಿಡಿದು ಜಾತೀಯತೆಯನ್ನು ತೊಡೆದು ವರ್ಣಾಶ್ರಮ ಪದ್ಧತಿಯನ್ನು ರದ್ದುಗೊಳಿಸಿ, ಸ್ತ್ರೀಯರಿಗೂ ಅಸ್ಪೃಶ್ಯರಿಗೂ ಸಮಾನತೆಯ ಆಧಾರದ ಮೇಲೆ ಪ್ರವೇಶ ನೀಡಿ, ಪೌರೋಹಿತ್ಯವನ್ನು ನಿರ್ಮೂಲನಗೊಳಿಸಿದ್ದು ಜಗತ್ತಿನ ಮತೀತ ಚರಿತ್ರೆಯಲ್ಲಿ ಮಹಾಕ್ರಾಂತಿಯೆಂಬ ಪ್ರಶಸ್ತಿಗೆ ಪಾತ್ರವಾಗುವುದರಲ್ಲಿ ಸಂದೇಹವಿಲ್ಲ.

*(ಮುಂದುವರಿಯುತ್ತದೆ)* ★

## ಕಂಬನಿ



### ಡಾ. ಶಾಂತಾದೇವಿ ಮಾಳವಾಡ

ಕನ್ನಡ ಸಾರಸ್ವತ ಲೋಕದ ನಕ್ಷತ್ರವೊಂದು ದಿನಾಂಕ : ೮.೮.೦೫ರಂದು ಅಸ್ತಂಗತವಾದುದನ್ನು ತಿಳಿದು ಅತೀವ ದುಃಖವನ್ನು ಅನುಭವಿಸುವಂತಾಯಿತು 'ಸಿದ್ಧಗಂಗಾ'ಕ್ಕೆ. ಹಿರಿಯರೂ, ಖ್ಯಾತನಾಮರೂ, ಶಾಂತಸೌಮ್ಯ ಸ್ವಭಾವಕ್ಕೆ ಹೆಸರಾದವರೂ ಆಗಿದ್ದ ಡಾ. ಶಾಂತಾದೇವಿ ಮಾಳವಾಡ ಅವರು ಭಾನುವಾರ ಬೆಳಗಿನಜಾವ ನಾಲ್ಕು ಘಂಟೆಯಲ್ಲಿ ಲಿಂಗೈಕ್ಯರಾದರು.

ಶ್ರೀಮತಿ ಶಾಂತಾದೇವಿಯವರು ಸ್ತ್ರೀವಾದಿಗಳಾಗಿ ಸಾಹಿತ್ಯ ಕೃಷಿ ಮಾಡುವುದರ ಜೊತೆಗೆ ಉತ್ತಮ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದರು. ಓದಿದ್ದು ಮಾಧ್ಯಮಿಕ ಶಾಲೆಯವರೆಗಾದರೂ ರಚಿಸಿದ ಕೃತಿಗಳು ಶ್ರೇಷ್ಠವೆನಿಸಿಕೊಂಡವು. ಮೊಗ್ಗಿಯ ಮಾಲೆ, ಕುಂಕುಮ ಬಲ, ಶೂರರಾಣಿ ಕೆಳದಿಯ ಚೆನ್ನಮ್ಮಾಜಿ, ದಾನದಾಸೋಹಿ ದಾನಮ್ಮ, ಬಸವ ಪ್ರಕಾಶ ಅವರ ಕೃತಿಗಳು.

ಲಿಂಗೈಕ್ಯ ಸ.ಸ. ಮಾಳವಾಡರ ಸಹಧರ್ಮಿಣಿಯಾಗಿ, ಶರಣ ಸಂಸ್ಕೃತಿಯ ಆರಾಧಕರಾಗಿ, ಅರವಿಂದರ ಪ್ರಭಾವಕ್ಕೊಳಗಾಗಿ, ಬೆಳೆದು ಬಂದ ಶಾಂತಾದೇವಿಯವರು ಸಮಾಜ ಸೇವೆಯಲ್ಲಿ ಶಿವಪೂಜಾನಂದವನ್ನು ಕಂಡವರಾಗಿದ್ದರು. ೨೦೦೦ದಲ್ಲಿ ಬಾಗಲಕೋಟೆಯಲ್ಲಿ ನಡೆದ ೭೧ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಗೌರವಿತರಾಗಿದ್ದ ಶ್ರೀಮತಿ ಶಾಂತಾದೇವಿಯವರು ಮತ್ತು ಪ್ರೊ|| ಸ.ಸ. ಮಾಳವಾಡರು ಶ್ರೀ ಸಿದ್ಧಗಂಗಾ ಶ್ರೀಗಳವರಲ್ಲಿ ಅನನ್ಯ ಭಕ್ತಿ ಶ್ರದ್ಧೆಯುಳ್ಳವರಾಗಿದ್ದರು. ಶ್ರೀಗಳವರಲ್ಲಿ 'ಅರವಿಂದ'ರನ್ನು ಕಾಣುತ್ತಿದ್ದರು. ಶ್ರೀಮತಿಯವರ ಅಗಲಿಕೆಯಿಂದ ಕನ್ನಡ ಸಾಹಿತ್ಯಲೋಕ ನಷ್ಟವನ್ನು ಕಾಣುವಂತಾಗಿದೆ. ಅಕ್ಕನವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ಬಸವಾದಿ ಶರಣರು ನೀಡಲೆಂದು ಆಶಿಸುತ್ತ ಶ್ರೀಮತಿ ಶಾಂತಾದೇವಿಯವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಕಂಬನಿಯೊಂದಿಗೆ ಪ್ರಾರ್ಥಿಸುತ್ತದೆ.



# ಪ್ರಾರ್ಥನೆ ಹಾಗೂ ಅದರ ಮಹತ್ವ

- ಜ. ಹೊ. ನಾರಾಯಣಸ್ವಾಮಿ
ವಕೀಲರು,
'ಮಾನಸ', 2064/ಎ, ಉತ್ತರ ಬಡಾವಣೆ,
ಹಾಸನ - 573201.
ದೂರವಾಣಿ : 08172-267200

ಪ್ರಾರ್ಥಿಸುವುದು ಎಂದರೆ ವಿಶೇಷವಾದ್ದನ್ನು ಗಳಿಸಿಕೊಳ್ಳುವುದು ಎಂದರ್ಥ. ಇಡೀ ವಿಶ್ವದಲ್ಲಿ ವಿಶೇಷವಾದದ್ದು ಬೆಳಕು ಒಂದೆ. 'ದೇವರು' ಎನ್ನುವ ಪದವೂ ಕೂಡ 'ದಿವ್' ಎನ್ನುವ ಧಾತುವಿನಿಂದ ಬಂದಿದೆ. ದಿವ್ ಎಂದರೆ ಬೆಳಕು. ಪ್ರಾರ್ಥನೆಯ ಅಂತಿಮ ಗುರಿ ಆ ಬೆಳಕನ್ನು ಪಡೆದುಕೊಳ್ಳುವುದೇ ಆಗಿದೆ. ಆದ್ದರಿಂದಲೇ ವಿಶ್ವದ ಶ್ರೇಷ್ಠಕವಿ ಕಾರ್ಡಿಯಲ್ ನ್ಯೂಮನ್ ''ಕರುಣಾಳು ಬಾ ಬೆಳಕೆ'' ಎಂದು ಬೆಳಕನ್ನು ಕರುಣಾಳುವಾಗಿ ಕಂಡು ಕರೆದರು.



ಪ್ರಾರ್ಥನೆ ನಮ್ಮಲ್ಲೆ ಸುಪ್ತವಾಗಿರುವ ಒಳ ಬೆಳಕನ್ನು ಕಂಡುಕೊಳ್ಳಲು ಅನುವು ಮಾಡಿಕೊಡುತ್ತದೆ. 'ನಾನು' ಎನ್ನುವ ಅಹಂಕಾರವನ್ನು ಅಳಿಸುವ ಅದ್ಭುತ ಶಕ್ತಿ ಪ್ರಾರ್ಥನೆಗೆ ಇದೆ. ಪ್ರಾರ್ಥನೆ ಎಂದರೆ ಬೇಡಿಕೊಳ್ಳುವುದಲ್ಲ, ತನ್ನನ್ನೇ ನೀಡಿಕೊಳ್ಳುವುದು. ಅಂತಹ ನಿವೇದನೆಯಲ್ಲಿ ವೇದನೆಯಿಂದ ದೂರವಾದ ಪ್ರಫುಲ್ಲತೆ ಗರಿಗೆದರುತ್ತದೆ.

ಮನುಷ್ಯನಲ್ಲಿ ಚಿಂತನ ಶಕ್ತಿ ಪ್ರಾರಂಭವಾದಂದಿನಿಂದ ಎರಡು ಪಂಥಗಳು ಹುಟ್ಟಿಕೊಂಡಿವೆ. ಅವುಗಳೆಂದರೆ ಆಸ್ತಿಕತೆ ಹಾಗೂ ನಾಸ್ತಿಕತೆ. ದೇವರಲ್ಲಿ ನಂಬಿಕೆ ಇಟ್ಟವನನ್ನು ಆಸ್ತಿಕನೆಂದೂ ಇಡದವನನ್ನು ನಾಸ್ತಿಕನೆಂದೂ ಕರೆಯುತ್ತಾರೆ.

ದೇವರ ಹೆಸರಿನಲ್ಲಿ ಶೋಷಣೆ ಮಾಡುವ ಪುರೋಹಿತ ಶಾಹಿಯ ಕುಟಿಲ ತಂತ್ರಗಳಿಂದಾಗಿ ಸೃಷ್ಟಿಗೆ ಮೂಲವಾದ ಅವ್ಯಕ್ತ ಶಕ್ತಿಯ ಅರಿವು ಮರೆಯಾಗಿದೆ. ಹಾಗೆ ದೇವರ ಅಸ್ತಿತ್ವವನ್ನು ನಿರಾಕರಿಸುವ ನಾಸ್ತಿಕರು ಎಲ್ಲವನ್ನು ಕೇವಲ ಭೌತಿಕ ಆಧಾರದ ಮೇಲೆ ನಿರ್ಣಯಿಸುವ ಶುಷ್ಕ ಕ್ರಿಯೆಯಿಂದಾಗಿ ರಸಾನುಭೂತಿಯಿಂದ ವಂಚಿತರಾಗಿದ್ದಾರೆ. 'ಪ್ರಾರ್ಥನೆ' ಸ್ವೀಕರಣೆ ಹಾಗೂ ನಿರಾಕರಣೆಯ ಮಧ್ಯ ಸೇತುವಾಗಿ ಅವ್ಯಕ್ತ ಶಕ್ತಿಯೊಂದರ ಆವಿರ್ಭಾವಕ್ಕೆ ಸಂಜೀವನ ಶಕ್ತಿಯಾಗಿದೆ.

ಯಾವುದನ್ನು ನಾವು ಅವ್ಯಕ್ತ ಶಕ್ತಿ ಎಂದು ಕರೆಯುತ್ತೇವೆಯೋ ಅದು ಹೊರಗೆಲ್ಲೋ ಅವಿತು ಕುಳಿತಿರುವುದಲ್ಲ. ಅದು ತಮ್ಮೊಳಗೇ ಸುಪ್ತವಾಗಿರುವ ಚೈತನ್ಯ ಜಾಗೃತಿ ಆ ಜಾಗೃತಿಗೆ ಕೀಲಿ ಕೈಯಾಗಿರುವುದೇ ಪ್ರಾರ್ಥನೆ.

ಪ್ರಾರ್ಥನೆಯನ್ನು ಕುರಿತು ಗಾಂಧೀಜಿಯವರು ಹೀಗೆ ಅಭಿಪ್ರಾಯಪಡುತ್ತಾರೆ.

*''ಸರಿಯಾಗಿ ಅರಿತು ಆಚರಣೆ ತಂದರೆ ಪ್ರಾರ್ಥನೆ ಕ್ರಿಯಾತ್ಮಕತೆಗೆ ಸಮರ್ಥ ಉಪಕರಣ. ಪ್ರಾರ್ಥನೆಗೆ ಪೂರಕವಾದುದು ದೈವದಲ್ಲಿ ಜೀವಂತ ನಂಬಿಕೆ ಎನ್ನುವುದಲ್ಲಿ ಯಾವ ಅನುಮಾನವೂ ಇಲ್ಲ. ಜೀವನದ ಅನೇಕ ಮಾರ್ಗಗಳಲ್ಲಿ 'ನಾನು'' ಎನ್ನುವ ಅಹಂಕಾರವನ್ನು ಅಳಿಸಿ ಉದಾತ್ತ ಧ್ಯೇಯ ಹಾಗೂ ಸಾಹಸ ಕಲೆಯನ್ನು ಕಲಿಸುವ ಮೊದಲ ಹಾಗೂ ಕೊನೆಯ ಪಾಠವೆಂದರೆ ಪ್ರಾರ್ಥನೆಯೆ ಆಗಿದೆ''.*

ಗಾಂಧೀಜಿಯವರ ಈ ಮಾತುಗಳು ಮನನಯೋಗ್ಯವಾದವುಗಳು. ವ್ಯಕ್ತಿಯಲ್ಲಿ ಸುಪ್ತವಾಗಿರುವ ಶಕ್ತಿ ಜಾಗೃತಗೊಳ್ಳಲು, ಪ್ರಭಲವಾಗಲು, ವಿಶ್ವವ್ಯಾಪಕವಾಗಲು, ತನ್ಮೂಲಕ ಜೀವನ





ಪಾವನಗೊಳ್ಳಲು ಪ್ರಾರ್ಥನೆ ಒಂದು ದಿವ್ಯ ಅಸ್ತ್ರವಾಗಿದೆ. ಅದು ನಮ್ಮೊಳಗೆ ಮೊಳಕೆಯೊಡೆಯಲು ಯತ್ನಿಸುವ ದುಷ್ಟ ಶಕ್ತಿಯನ್ನು ದಮನ ಮಾಡಿ, ದಿವ್ಯ ಶಕ್ತಿಯನ್ನು ಜಾಗೃತಗೊಳಿಸಿ ವ್ಯಕ್ತಿಗೆ ಶಾಂತಿಯನ್ನ, ಬದುಕಿಗೆ ಕಾಂತಿಯನ್ನ ದಯಪಾಲಿಸುತ್ತದೆ.

'ನಾನು' ಎನ್ನುವ ಅಹಂಕಾರದ ದಮನಕ್ಕೆ ಪ್ರಾರ್ಥನೆ ಸಹಕಾರಿಯಾಗಿದೆ. ಅಹಂಕಾರ ಅಳಿದರೆ ಅನಂತ ಆವರಿಸಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಕುವೆಂಪು ''ನಾನು ಅಳಿದರೆ ನೀನು ಇಳಿಯುವೆ'' ಹಾಗೂ ''ಇಲ್ಲಗೈಯ ತನ್ನ ತಾನು ದೇವರಲ್ಲದುಳಿವುದೇನು?'' ಎಂದು ಹೇಳಿರುವುದು.

ರವೀಂದ್ರನಾಥ ಠಾಗೋರ್ ಅವರ 'ಗೀತಾಂಜಲಿ' ಪ್ರಾರ್ಥನಾ ರೂಪದ ಕವನ ಸಂಗ್ರಹ. ಅದಕ್ಕೆ ನೋಬೆಲ್ ಪ್ರಶಸ್ತಿ ಸಂದಿದೆ. ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೆ ಕುವೆಂಪು ಅದನ್ನು ಆಮೂಲಾಗ್ರ ಓದಿದ್ದರು. ಅವರ ಮೇಲೆ ಅದು ಉಂಟು ಮಾಡಿದ ಪ್ರಭಾವವನ್ನು ಕುರಿತು ಕುವೆಂಪು ಹೀಗೆ ಬರೆಯುತ್ತಾರೆ :-

*ಒಬ್ಬ ಪ್ರೇಮಿ ತನ್ನ ಪ್ರಿಯತಮೆಯನ್ನು ಕೂಡ ಆ ರೀತಿ ಮುದ್ದಾದಿ ಆಸ್ವಾದಿಸುತ್ತಾನೆಯೋ ಇಲ್ಲವೋ! ಎಷ್ಟು ದಿನಗಳು ಅದರ ಮಾದಕತೆಯಲ್ಲಿ ಕಳೆದವೋ..? ಕವನಗಳಲ್ಲಿ ಸ್ಫುರಿಸುತ್ತಿದ್ದ ಕವಿ ಹೃದಯದ ಪ್ರಾರ್ಥನೆ, ಅಭೀಪ್ಸೆ, ಆರಾಧನೆ, ಅನಂತತಾ ಆಕಾಂಕ್ಷೆ, ಸುಮಧುರಾ ಸ್ವಪ್ನ ಸ್ವಾಪ್ನಿಕಾಹ್ವಾನ ಇವು ನನ್ನ ಆತ್ಮವನ್ನು ತಮ್ಮ ಇಂದ್ರಚಾಪ ಸದೃಶವಾದ ವರ್ಣೋಪವರ್ಣಮಯ ಭಾವಪಾಶಗಳಿಂದ ನೆಯ್ದ ಇಂದ್ರಜಾಲದಿಂದ ಬಂಧಿಸಿ, ಸುದೂರದೊಂದು ಇಂದ್ರಲೋಕಕ್ಕೊಯ್ದವು... ಆಧ್ಯಾತ್ಮಿಕ ಸತ್ಯಕ್ಕೆ ಒಂದು ಕಾವ್ಯ ಸೌಂದರ್ಯದ ದರ್ಶನ ದೀಪ್ತಿ ಸಂಗಮಿಸಿದಂತಾಯ್ತು''.*

'ಗೀತಾಂಜಲಿ' ಕುವೆಂಪು ಅವರ ಮೇಲೆ ಮಾಡಿರುವ ಪ್ರಭಾವ ಅನನ್ಯವಾದುದು. ಅತಿಶಯವಾದುದು. ಇದರಿಂದಾಗಿ ಮುಂದೆ ವಿಶ್ವಮಾನವ ಸಂದೇಶ ನೀಡುವ ದಿವ್ಯ ದೃಷ್ಟಿ ಕವಿ ಹೃದಯದಲ್ಲಿ ಅರಳುತ್ತದೆ. ಅದಕ್ಕೆ ಬೀಜಮಂತ್ರವೋ ಎಂಬಂತೆ ಕುವೆಂಪು ಅವರು ೧೯೨೮ರಲ್ಲಿ ತಮ್ಮ ೨೪ನೇ ವಯಸ್ಸಿನಲ್ಲಿ ಬರೆದ ''ಪ್ರಾರ್ಥನೆ'' ಪದ್ಯ ತನ್ನ ಆಳ ಅಗಲ ವಿಸ್ತಾರಗಳಿಂದ ಅರಳಿ ಬಂದಿದೆ.

### ಪ್ರಾರ್ಥನೆ

ನಿನ್ನ ಬಾಂದಳದಂತೆ
ನನ್ನ ಮನವಿರಲಿ
ನಿನ್ನ ಸಾಗರದಂತೆ
ನನ್ನ ಎದೆಯಿರಲಿ
ನಿನ್ನ ಸುಗ್ಗಿಯ ತೆರದಿ
ನನ್ನ ಸೊಬಗಿರಲಿ
ನಿನ್ನ ಲೀಲೆಯ ತೆರದಿ
ನನ್ನ ಬಾಳಿರಲಿ
ನಿನ್ನೊಲ್ಮೆಯಂದದಲಿ
ನನ್ನೊಲ್ಮೆಯಿರಲಿ ;
ನಿನ್ನಾಳವೆನಗಿರಲಿ
ನೀನೆ ನನಗಿರಲಿ ;
ನಿನ್ನ ಬಲವಿರುವಂತೆ
ನನ್ನ ಬಲವಿರಲಿ
ನಿನ್ನ ತಿಳಿವಿರುವಂತೆ
ನನ್ನ ತಿಳಿವಿರಲಿ
ನಿನ್ನಾತ್ಮದಾನಂದ
ನನ್ನದಾಗಿರಲಿ ;
ನಿನ್ನೊಳಿರುವಾ ಶಾಂತಿ
ನನ್ನೆದೆಗೆ ಬರಲಿ.

ಮಹಾತ್ಮ ಗಾಂಧೀಜಿಯವರು ತಮ್ಮ ಉಸಿರಿನೊಂದಿಗೆ ಒಂದಾಗಿಸಿಕೊಂಡಿದ್ದ ಅತ್ಯಂತ ಜನಪ್ರಿಯವಾದ 'ಪ್ರಾರ್ಥನೆ' ಪದ್ಯವೂ ಕೂಡ ಮನುಕುಲದ ಐಕ್ಯತೆಯನ್ನು ಸಾರುತ್ತದೆ. ಮನುಕುಲದ ಏಕತೆಯನ್ನು ಹಾಗೂ ಐಕ್ಯತೆಯನ್ನು ಗಾಂಧೀಜಿ ಪ್ರಾರ್ಥನೆಯ ಮೂಲಕ ಸಾಧಿಸಿದ್ದಾರೆ. ಆ ಪ್ರಾರ್ಥನೆ ಎಂದರೆ -

*ರಘುಪತಿ ರಾಘವ ರಾಜಾರಾಂ
ಪತಿತ ಪಾವನ ಸೀತಾರಾಂ
ಈಶ್ವರ ಅಲ್ಲಾ ತೇರಾನಾಂ
ಸಬಕು ಸನ್ಮತಿ ದೇ ಭಗವಾನ್*

ಯಾವ ಹೆಸರಿನಿಂದ ಕರೆದರೂ ದೈವ ಒಂದೆ. ಎಲ್ಲರಿಗೂ ಅಗತ್ಯ ಬೇಕಾದುದು ಸನ್ಮತಿ. ಅದು ಸಾಧ್ಯವಾಗುವುದು ಪ್ರಾರ್ಥನೆಯಿಂದ. ಜೀವನವಿಡೀ ಚರಕವನ್ನು ಜಪಮಣಿಯಂತೆ ತಿರುಗಿಸುತ್ತಾ ಗಾಂಧೀಜಿಯವರು ಪ್ರಾರ್ಥನೆಯೊಂದಿಗೆ ಮಾಡುತ್ತಿದ್ದ ಅನುಸಂಧಾನ ಐಕ್ಯತೆಯ ಪ್ರತೀಕವಾಗಿತ್ತು. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಪಾರ್ಸಿ, ಸಿಖ್, ಬೌದ್ಧ, ಜೈನ ಮುಂತಾದ ಎಲ್ಲರೂ ಒಂದೇ, ನಾವು ಮಾನವರು, ಭೇದ ಭಾವಕ್ಕೆ ಎಡೆಗೊಡದೆ ವಿಶ್ವಶಾಂತಿಗಾಗಿ ಅಹಿಂಸಾ ವ್ರತಧಾರಿಯಾಗಲು ಅವರಿಗೆ ಪ್ರೇರಣೆ ನೀಡಿರುವುದು ಪ್ರಾರ್ಥನೆಯೆ.

ಮನುಷ್ಯ ಮನುಷ್ಯರ ನಡುವೆ ಇದ್ದ ಅಸಮಾನತೆಯನ್ನು ಅಳಿಸಿ ಸಮಾನತೆಯನ್ನು ಸಾಧಿಸಿದ ಮಹಮ್ಮದ್ ಪೈಗಂಬರ್ ಪ್ರಾರ್ಥನೆಯ ಮಹತ್ವವನ್ನು ಅರಿತಿದ್ದ ಅಪೂರ್ವ ದಾರ್ಶನಿಕರು. ಆದ್ದರಿಂದಲೆ ಅವರು ಪ್ರಾರ್ಥನೆಯನ್ನು ಕಡ್ಡಾಯಗೊಳಿಸಿದರು. ಪ್ರಾರ್ಥನೆ ಹೃನ್ಮನಗಳನ್ನು ಶುದ್ಧಗೊಳಿಸಿ ಅಲ್ಲಿ ಪವಿತ್ರತೆ ಮೂಡಲು ಪ್ರೇರಣೆ ನೀಡುತ್ತದೆ ಎನ್ನುವ ಸತ್ಯವನ್ನು ಅವರ ಬೋಧನೆ ತಿಳಿಸುತ್ತದೆ.

ಪ್ರಶಂಸೆ, ಪೂಜೆ, ಆರಾಧನೆ, ಉಪಾಸನೆಗಳನ್ನು ಕುರಿತು ಕುವೆಂಪು ಅವರು 'ವಿಭೂತಿ ಪೂಜೆ' ಕೃತಿಯಲ್ಲಿ ನೀಡಿರುವ ವಿಶ್ಲೇಷಣೆ ವೈಜ್ಞಾನಿಕ ನೆಲೆಯದಾಗಿದ್ದು ಅರ್ಥಪೂರ್ಣವಾಗಿದೆ. 'ಕವಿಯಲ್ಲಿ ವಿಭೂತಿ' ಎನ್ನುವ ಲೇಖನದಲ್ಲಿ ಹೀಗೆ ತಿಳಿಯಪಡಿಸುತ್ತಾರೆ.

*"ಪ್ರಶಂಸೆ, ಪೂಜೆ, ಆರಾಧನೆ, ಉಪಾಸನೆಗಳು ನಮ್ಮ ಮನಸ್ಸಿನ ಅಥವಾ ಬುದ್ಧಿಯ ಯಾವ ವ್ಯಾಪಾರಗಳನ್ನು ವರ್ಣಿಸುತ್ತವೆ ಎಂಬುದನ್ನು ಪರಿಶೀಲಿಸಿದರೆ ನಮ್ಮ ಚೇತನದ ಅತಿ ನಿಗೂಢವಾದ ಎರಡು ಪ್ರಧಾನ ಲಕ್ಷಣಗಳು ಗೋಚರವಾಗುತ್ತದೆ. ಒಂದು ಅದರ ಊರ್ಧ್ವಮುಖತೆ, ಮತ್ತೊಂದು ಅದರ ಊರ್ಧ್ವಯಾತ್ರೆ, ಅನ್ಯರಲ್ಲಿದ್ದು ಸದ್ಯಕ್ಕೆ ತನಗಿಲ್ಲದ ಆದರೂ ಪಡೆಯಲಾಶಿಸುವ ಮನೋಧರ್ಮ ಪ್ರಶಂಸೆಯ ರೂಪದಲ್ಲಿ ಮೊದಲು ಮೈದೋರುತ್ತದೆ. ಇಂದು ತಾನಾಗಿಲ್ಲದಿದ್ದರೂ ಮುಂದೆ ತಾನಾಗಲೇ ಬೇಕೆಂಬ ಎದೆ ಹಂಬಲ ತೀವ್ರವಾದಂತೆಲ್ಲ ಆ ಪ್ರಶಂಸೆ ಪೂಜಾರೂಪಕ್ಕೆ ತಿರುಗುತ್ತದೆ. ಪೂಜಾವಸ್ತು ಆದರ್ಶವಾಗಿ ಪರಿಣಮಿಸುತ್ತದೆ. ತನ್ನ ಆಕಾಂಕ್ಷೆಯ ಆತ್ಮ ಶ್ರೀಯನ್ನು ಪಡೆದಿರುವ ಆ ವ್ಯಕ್ತಿ ಪೂಜ್ಯನಾಗುತ್ತಾನೆ. ಬರಿಯ ಊರ್ಧ್ವ ಮುಖವಾಗಿರುವ ಆಕಾಂಕ್ಷೆ ಸಾಧನೆಯ ರೂಪಕ್ಕೆ ತಿರುಗಿ ಊರ್ಧ್ವಯಾತ್ರಾ ರೂಪಿಯಾದೊಡನೆ ಪೂಜೆ ಆರಾಧನೆಯಾಗುತ್ತದೆ. ಆರಾಧನಾ ಭಾವನೆ ಉಜ್ವಲವಾಗಿ ತಪಸ್ಯಾ ರೂಪಕ್ಕೆ ತಿರುಗಿದರೆ ಉಪಾಸನೆಯಾಗುತ್ತದೆ. ಉಪಾಸನೆ ತುತ್ತ ತುದಿಗೆ ತಲ್ಲಿನತಾ ರೂಪದ ಸಾಕ್ಷಾತ್ಕಾರದಲ್ಲಿ ಪರ್ಯಾವಸಾನ ಹೊಂದುತ್ತದೆ. ಆಗ ಸಾಧಕನಿಗೆ ಸಿದ್ಧಿಯಾಯಿತೆಂದು ಹೇಳುತ್ತೇವೆ. ಸಿದ್ಧಿಯೆಂದರೆ ನಿಸ್ತರಂಗವಾದ ನಿರಪೇಕ್ಷಕವಾದ ಪೂರ್ಣತಾ ವಿಶ್ರಾಂತಿ, ತಾದಾತ್ಮ್ಯ ಶಾಂತಿ".*

ಪ್ರತಿಯೊಬ್ಬರಲ್ಲಿಯೂ ಸುಪ್ತವಾಗಿರುವ ಚೈತನ್ಯ ದೀಪ್ತವಾಗಿ 'ಶಾಂತಿ'ಯ ಉತ್ತುಂಗಕ್ಕೆ ಏರುವ ಸಾಧ್ಯತೆಯನ್ನು ಅರಿವಿಗೆ ತಂದುಕೊಡುವ ಅಭಿವ್ಯಕ್ತಿ ಇದಾಗಿದೆ. ಅವರು ತಮ್ಮ ಮೇರು ಕಾವ್ಯವಾದ 'ಶ್ರೀರಾಮಾಯಣ ದರ್ಶನಂ'ನಲ್ಲಿ ಮಾಡಿರುವ ಪ್ರಾರ್ಥನೆ ವೈವಿಧ್ಯಮಯವೂ, ವಿಶಿಷ್ಟಪೂರ್ಣವೂ, ಅಸೀಮವೂ ಆಗಿದೆ. ಆ ಕಾವ್ಯವನ್ನು ರಚಿಸಲು ಕವಿ ಒಂಭತ್ತು ವರ್ಷಗಳ ದೀರ್ಘಕಾಲವನ್ನು ತೆಗೆದುಕೊಂಡಿದ್ದಾರೆ. ಎಂದರೆ ಅದು ಒಂಭತ್ತು ವರ್ಷಗಳ ದೀರ್ಘಕಾಲವನ್ನು ತೆಗೆದುಕೊಂಡಿದ್ದಾರೆ. ಎಂದರೆ ಅದು ಒಂಬತ್ತು ವರ್ಷಗಳ ದೀರ್ಘ ತಪಸ್ಸು. ಕಾವ್ಯದ ಅನೇಕ ಸಂದರ್ಭಗಳಲ್ಲಿ ಅವರು ಪ್ರಾರ್ಥಿಸುತ್ತಾರೆ. ಅದರ ಒಂದು ತುಣುಕನ್ನು ನೋಡಿ. ಅದು ಹೃದಯ ವೈಶಾಲ್ಯತೆಯಿಂದ ಕೂಡಿ ವಿಶ್ವ ವ್ಯಾಪಕತೆಯನ್ನು ಒಳಗೊಂಡ ಪ್ರಾರ್ಥನೆಯಾಗಿದೆ.

ಹೋಮರಗೆ ವರ್ಜಿಲಗೆ ಡಾಂಟೆ ಮೇಣ್ ಮಿಲ್ಟನಗೆ
ನಾರಾಣಪ್ಪಂಗೆ ಮೇಣ್ ಪಂಪನಿಗೆ, ಋಷಿವ್ಯಾಸ
ಭಾಸ ಭವಭೂತಿ ಮೇಣ್ ಕಾಳಿದಾಸಾದ್ಯರಿಗೆ
ನರಹರಿ ತುಲಸಿದಾಸ ಮೇಣ್ ಕೃತ್ತಿವಾಸಾದಿ
ನನ್ನಯ್ಯ ಫಿರ್ದೂಸಿ ಕಂಬಾರವಿಂದರಿಗೆ,
ಹಳಬರಿಗೆ ಹೊಸಬರಿಗೆ ಹಿರಿಯರಿಗೆ ಕಿರಿಯರಿಗೆ,
ಕಾಲ ದೇಶದ ನುಡಿಯ ಜಾತಿಯ ವಿಭೇದಮಂ
ಲೆಕ್ಕಿಸದೆ ಜಗತೀಕಲಾಚಾರ್ಯರೆಲ್ಲಗೆ
ಜ್ಯೋತಿಯಿರ್ಪೆಡೆಯಲ್ಲಿ ಭಗವದ್ ವಿಭೂತಿಯಂ
ದರ್ಶಿಸುತೆ, ಮುಡಿಬಾಗಿ ಮಣಿದು ಕೈಜೋಡಿಸುವೆನಾಂ,
ಲೋಕ ಗುರು ಕೃಪೆಯಿರಲಿ ; ಲೋಕ ಕವಿಕೃಪೆ ಬರಲಿ ;
ಲೋಕ ಹೃದಯದ ಬಯಕೆಯಾಶೀರ್ವಾದವೈತರಲಿ,
ಮಣಿದಿರಲಿ ಮುಡಿ ; ಮತ್ತೆ ಮುಗಿದಿರಲಿ ಕಯ್ ; ಮತ್ತೆ
ಮಡಿಯಾಗಿರಲಿ ಬಾಳ್ವೆ, ಜಯಿಸುವೆ ರಸತಪಸ್ಯೆ ;
ದೊರಕೊಳುಗೆ ಚಿರಶಾಂತಿ ; ಸಿರಿಗನ್ನಡಂ ಗೆಲ್ಗೆ !

ಪ್ರಾರ್ಥನೆಯಿಂದ ಹೃದಯಮನಸ್ಸುಗಳಿಗೆ ವೈಶಾಲ್ಯತೆ ಪ್ರಾಪ್ತವಾಗುತ್ತದೆ ಎನ್ನುವುದಕ್ಕೆ ಈ ಮೇಲಿನ ಪ್ರಾರ್ಥನೆಯೆ ಸಾಕ್ಷಿಯಾಗಿದೆ. ಅವರಿಗೆ ಜ್ಯೋತಿ ಇರುವಲ್ಲೆಲ್ಲ ಭಗವದ್ ವಿಭೂತಿಯ ದರ್ಶನವಾಗುತ್ತದೆ'!.

"ಹಾರೈಸು, ಹಾರೈಸು, ಹಾರೈಸು ಜೀವ
ಹಾರೈಸು ನೀನಾಗುವನ್ನೆಗಂ ದೇವ !"

ಎನ್ನುವ ಕುವೆಂಪು ಅವರ ಅಮರ ಪ್ರಾರ್ಥನೆಯಂತೆ ಪ್ರತಿಯೊಂದು ಜೀವವೂ ಪ್ರಾರ್ಥನೆ ಮಾಡುವುದರ ಮೂಲಕ ದೈವತ್ವವನ್ನು ಪ್ರಾಪ್ತಿ ಮಾಡಿಕೊಳ್ಳುವ ಪ್ರೇರಣೆಯುಂಟಾಗಲಿ. ಪ್ರಾರ್ಥನೆಯ ಮಹತ್ವ ಅಡಗಿರುವುದು ಅಂತಹ ಪ್ರೇರಣೆಯಲ್ಲಿಯೇ.

★





# ನರಕದ ದ್ವಾರ (೧) ಕಾಮ

- ಎಂ. ಮಾಧವ ಪೈ
"ಶ್ರೀನಿವಾಸ", ಡಿ.ವಿ.ಎಸ್. ಹೈಸ್ಕೂಲ್ ಸಮೀಪ,
ಮೊದಲನೇ ಹಂತ, ವಿನೋಬ ನಗರ,
ಶಿವಮೊಗ್ಗ.

'ದುರ್ವ್ಯಸನಿ ದುರಾಚಾರಿಯೆನಿಸದಿರಯ್ಯಾ' ಎಂದು ಪರಶಿವನಲ್ಲಿ ಪ್ರಾರ್ಥಿಸಿದ್ದರು ಬಸವಣ್ಣನವರು. ಬಸವಣ್ಣನವರ ಈ ಪ್ರಾರ್ಥನೆ ಜನಸಾಮಾನ್ಯರಾದಿ ಸಕಲರ ಪ್ರಾರ್ಥನೆಯೂ ಆಗಬೇಕು ಎಂಬುದರಲ್ಲಿ ಎರಡು ಮಾತಿಲ್ಲ.

ಮಾನವನಾಗಿ ಜನ್ಮಕ್ಕೆ ಬಂದವನು ಸನ್ಮಾರ್ಗಪಥಿಕನಾಗಿ ಭೂಮಿಯಿಂದ ಭೌಮಕ್ಕೇರಬೇಕು ಎಂಬುದು ಶರಣರು ಮುಂದಿಟ್ಟ ಆದರ್ಶ. ಲೋಕಭಾವನೆಯು ಇದೇ ಆಗಿದೆ. ಆದರೆ ಹೆಚ್ಚಿನವರಿಗೆ ಈ ಭಾವನೆ ಕೇವಲ ಭಾವನೆ ಮಾತ್ರವಾಗಿದೆಯೇ ಹೊರತು, ಈ ಭಾವನೆಯನ್ನು ಸಾರ್ಥಕಗೊಳಿಸಿಕೊಳ್ಳಲು ಹಿಡಿಯಬೇಕಾದ ದಾರಿಯನ್ನು ಮಾತ್ರ ಹಿಡಿಯುವುದಿಲ್ಲವೆಂಬುದು ಕಂಡುಬರುವ ದೃಶ್ಯ. ಪುಣ್ಯದ ಫಲವನ್ನು ಇಚ್ಛಿಸುತ್ತಾರೆಯೇ ಹೊರತು ಪುಣ್ಯದ ಕಾರ್ಯಗಳನ್ನು ಮಾಡುವುದಿಲ್ಲ ಎಂದೊಂದು ಸುಭಾಷಿತದಲ್ಲಿ ಹೇಳಿದಂತೆ ಸ್ವರ್ಗದಿಚ್ಛೆಯನ್ನು ಮಾಡುತ್ತಾರೆಯೇ ಹೊರತು ಸ್ವರ್ಗಪಡೆಯಲು ಆಚರಣೆ ಮಾಡಬೇಕಾದುದನ್ನು ಮಾತ್ರ ಮಾಡುತ್ತಿಲ್ಲ. ಕಾರಣ ಅರಿಷಡ್ವರ್ಗಗಳು ಅವನಿಗೆ ಹೆಜ್ಜೆ ಹೆಜ್ಜೆಗೂ ತಡೆಯೊಡ್ಡುತ್ತಿರುತ್ತವೆ –

*"ಕಾಮ ಸತ್ಯವ ತಿಂದಿತ್ತು, ಕ್ರೋಧ ಜ್ಞಾನವ ತಿಂದಿತ್ತು*
*ಲೋಭ ಧರ್ಮವ ತಿಂದಿತ್ತು*
*ಮೋಹ ವಿರಕ್ತಿಯ ತಿಂದಿತ್ತು, ಮದ ಭಕ್ತಿಯ ತಿಂದಿತ್ತು*
*ಮತ್ಸರ ಯುಕ್ತಿಯ (ಮುಕ್ತಿಯ) ತಿಂದಿತ್ತು"*

ಪ್ರಭುದೇವರ ಈ ವಚನದಂತೆ ಈ ವೈರಿಗಳು ಮಾನವನ ಸತ್ಯ, ಧರ್ಮ, ಜ್ಞಾನ, ವಿರಕ್ತಿ, ಭಕ್ತಿ ಯುಕ್ತಿ (ಮುಕ್ತಿ) ಎಲ್ಲವನ್ನೂ ತಿಂದು ಹಾಕುತ್ತಿವೆ. ಹೀಗಾಗಿ ಈ ಲೋಕದಲ್ಲಿ ಜನ್ಮಕ್ಕೆ ಬಂದಿದ್ದೇವೆ, ಇಲ್ಲಿ ಬದುಕಿರುವಷ್ಟು ಕಾಲ ಇಲ್ಲಿಯ ಸುಖವನ್ನು ಅನುಭವಿಸುವುದೇ ಮುಖ್ಯವೆಂದು ತಿಳಿದು, ಆ ಸುಖಭೋಗಗಳನ್ನು ಅನುಭವಿಸಲು ಹೆಣಗಾಡುತ್ತಿರುತ್ತಾರೆ. ಇಲ್ಲಿಯ ಸುಖದ್ದೇ ಆಶೆ. ಈ ಆಶೆಯಿಂದ ಪಡೆಯಬೇಕಾದ ಸುಖ ಪ್ರಾಪ್ತವಾಗದಿದ್ದರೆ ಕ್ರೋಧ, ಆ ಸುಖ ಪ್ರಾಪ್ತವಾಯಿತೆಂದರೆ, ಅದು ಸದಾ ತನ್ನದಾಗಿಯೇ ಉಳಿಸಿಕೊಳ್ಳಬೇಕೆಂಬ ಲೋಭ, ಈ ಮೂರನ್ನು ಆಶ್ರಯಿಸಿಕೊಂಡು ಅವುಗಳ ದ್ವಾರದಲ್ಲಿಯೇ ಹೊರಳಾಡುತ್ತಲೇ ಇರುತ್ತಾರೆ. ಆದರೆ ಈ ಮೂರು ದ್ವಾರಗಳು ಸುಖ ಪಡೆಯಲು ಪ್ರವೇಶಿಸಬೇಕಾದ ದ್ವಾರಗಳಾಗಿರದೆ, ಇವು ನರಕದ ದ್ವಾರಗಳಾಗಿವೆ --

*ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।*
*ಕಾಮಕ್ರೋಧಸ್ತಥಾ ಲೋಭಃ ತಸ್ಮಾದೇತತ್ತ್ರಯಿಂ ತ್ಯಜೇತ್ ॥*

ಕಾಮ, ಕ್ರೋಧ ಮತ್ತು ಲೋಭವೆಂಬ ಇವು ಮೂರು ಆತ್ಮನಾಶದ ಪಥವಾಗಿರುವ ನರಕದ ದ್ವಾರಗಳಾಗಿವೆ; ಆದ್ದರಿಂದ ಈ ಮೂರನ್ನು ತ್ಯಜಿಸಬೇಕು-ಬಿಟ್ಟುಬಿಡಬೇಕು ಎಂದೆನ್ನುತ್ತದೆ ಗೀತೆ.

ಪುಣ್ಯ ಮಾಡಿದವನು ಸ್ವರ್ಗಕ್ಕೆ ಹೋಗುತ್ತಾನೆ, ಪಾಪಮಾಡಿದವನು ನರಕಕ್ಕೆ ಹೋಗುತ್ತಾನೆ ಎಂದು ಹೇಳುವುದಿದೆಯಲ್ಲವೇ? ನರಕಕ್ಕೆ ಸಾಗಿಸುವ ಪಾಪದ ಮೂಲವಾಗಿರುವುವುಗಳೆಂದರೆ ಕಾಮ, ಕ್ರೋಧ ಮತ್ತು ಲೋಭ ಎಂದು ವಿಷ್ಣು ಧರ್ಮಸೂತ್ರದಲ್ಲಿಯೂ ಹೇಳಿದ್ದುಂಟು. ಆದ್ದರಿಂದ ನರಕದ ಈ ಮೂರು ದ್ವಾರಗಳಲ್ಲಿ ಪ್ರವೇಶಿಸದೆ ಇರಬೇಕಾದುದು ಮಾನವನ ಕರ್ತವ್ಯವಾಗಿದೆ.

ಈ ಮೂರು ದ್ವಾರಗಳಲ್ಲಿ ಒಂದಾದ ಕಾಮವೆಂದರೆ ಬಯಕೆ, ಇಚ್ಛೆ. ಅಂದರೆ ವಿಷಯಸುಖದ ವಾಸನೆ, ಇಂದ್ರಿಯಸುಖದ ಬಯಕೆ, ಭೋಗಿಸುವ ಇಚ್ಛೆ, ಕಾಂಕ್ಷೆ, ಅದರ ಬಾಯಾರಿಕೆ.

ಇಂದ್ರಿಯಸುಖದ ಚಿಂತೆ ಮಾಡುವವರಿಗೆ ಮೊದಲು ಅದರ ಸಂಗ ಮಾಡುವ ಆಸಕ್ತಿ ಉಂಟಾಗುತ್ತದೆ. ಈ ಸಂಗದಿಂದ ಅದನ್ನು ತಾನು ಭೋಗಿಸಬೇಕೆಂಬ ಕಾಮಭಾವನೆ ಮೂಡುತ್ತದೆ. ಅಂದರೆ ಅದರ ಬಾಯ್ಾರಿಕೆ, ದಾಹ ವೃದ್ಧಿಯಾಗುತ್ತದೆ. ಕಿವಿಗೆ ಆಲಿಸುವ ಬಾಯಾರಿಕೆ, ಕಣ್ಣಿಗೆ ನೋಡುವ ಬಾಯಾರಿಕೆ, ಮೂಗಿಗೆ ಮೂಸುವ ಬಾಯಾರಿಕೆ, ನಾಲಿಗೆಗೆ ರುಚಿಯನ್ನು ಆಸ್ವಾದಿಸುವ ಬಾಯಾರಿಕೆ, ಚರ್ಮಕ್ಕೆ ಸ್ಪರ್ಶಿಸುವ ಬಾಯಾರಿಕೆ – ಹೀಗೆ ಪ್ರತಿಯೊಂದು ಇಂದ್ರಿಯಕ್ಕೂ ಒಂದೊಂದು ಬಾಯಾರಿಕೆ ಇರುತ್ತದೆ. ಅದನ್ನು ನಾವು ತಡೆದರೂ ತಡೆಯಿಸಿಯಲಿಕ್ಕಾಗದ ಬಾಯಾರಿಕೆ. ಅಲ್ಲಮಪ್ರಭುಗಳು ಹೇಳಿದಂತೆ –

ಕಂಗಳೇಕೆ 'ನೋಡಬೇಡಾ' ಎಂದರೆ ಮಾಣವು

ಶ್ರೋತ್ರಂಗಳೇಕೆ 'ಆಲಿಸಬೇಡಾ' ಎಂದರೆ ಮಾಣವು

ಜಿಹ್ವೆ ಏಕೆ 'ರುಚಿಸಬೇಡಾ' ಎಂದರೆ ಮಾಣದು

ನಾಸಿಕವೇಕೆ 'ಮೂಸಬೇಡಾ' ಎಂದರೆ ಮಾಣದು

ತ್ವಕ್ಕು ಏಕೆ 'ಸೋಕಬೇಡಾ' ಎಂದರೆ ಮಾಣದು

ಎಂಬಂತೆ ನಾವು ಬೇಡ, ಬೇಡ ಎಂದರೂ ಅವು ಮಾಣವು. ಬೇಡ, ಅವು ಅದನ್ನು ಇಟ್ಟುಕೊಳ್ಳಲಿ, ಆ ಬಾಯಾರಿಕೆಯನ್ನು ನೀಗಿಸಿಕೊಳ್ಳಲಿ. ಆದರೆ ಬಾಯಾರಿಕೆ ಒಳಿತಾದುದಾಗಿರ ಬೇಕಾದುದು ಮುಖ್ಯ. ಸನ್ನುಡಿ, ಮಧುರಗಾನ ಆಲಿಸುವ ಬಾಯಾರಿಕೆ ಕಿವಿಗೆ, ಸತ್‌ಸೌಂದರ್ಯ, ಅಂದ ಚೆಂದ ನೋಡುವ ಬಾಯಾರಿಕೆ ಕಣ್ಣಿಗೆ, ಸತ್ ಸುಗಂಧ ಮೂಸುವ ಬಾಯಾರಿಕೆ ಮೂಗಿಗೆ; ಹೀಗೆ ಎಲ್ಲ ಇಂದ್ರಿಯಗಳಿಗೂ ಸತ್ ಬಾಯಾರಿಕೆ ಇದ್ದರೆ ಒಳಿತು. ಇಂತಹ ಬಾಯಾರಿಕೆ ಸದಾರೋಗ್ಯವನ್ನು ಮನಸ್ಸಿಗೆ ನೀಡುತ್ತದೆ. ಅದೇ ವಿಪರೀತವೂ ಅತಿಯೂ ಆದರೆ ಅದು ಹುಚ್ಚಾಗಿಸುತ್ತದೆ. ಅದರಲ್ಲಿಯೂ ಭೋಗಾಪೇಕ್ಷೆಯ ಲೈಂಗಿಕ ಸುಖದ ಬಾಯಾರಿಕೆ ಹೆಚ್ಚಿತೆಂದರೆ ಲಜ್ಜೆ ಭೀತಿಗಳೆಲ್ಲವನ್ನು ಕಳೆದುಕೊಂಡು ಮಾನವನು ಲಜ್ಜೆಗೇಡಿ, ಮಾನಗೇಡಿ ಎಂದೆನಿಸಿಕೊಳ್ಳುತ್ತಾನೆ; ಮಾತ್ರವಲ್ಲ ಜ್ಞಾನಹೀನನಾಗಿ ಹುಚ್ಚನಾಗುತ್ತಾನೆ. ಸಮಾಜದಲ್ಲಿ ಎಲ್ಲರಿಂದಲೂ ತಿರಸ್ಕೃತನಾಗುತ್ತಾನೆ.

ಮಾನವರಿಗೆ ಇರುವ ಬಯಕೆಗಳು ಅನಂತ. ಅವುಗಳನ್ನು ಪೂರೈಸುತ್ತ ಹೋದಂತೆ, ಹವಿಸ್ಸಿನಿಂದ ಹೋಮಾಗ್ನಿ ಪ್ರಜ್ವಲಿತವಾಗುವಂತೆ ವರ್ಧಿಸುತ್ತ ಹೋಗುತ್ತದೆ ಎಂದಿರುವಾಗ ಬಯಕೆಗಳನ್ನು ಭೋಗಿಸುವುದರಿಂದ ಅವು ಉಪಶಮನವಾಗದೆ ಇನ್ನೂ ಬೆಳೆಯುತ್ತಲೇ ಹೋಗುತ್ತವೆ – ನಜಾತು ಕಾಮಃ ಕಾಮಾನಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಏವಾಭಿವರ್ಧತೇ ॥ ಎಂದು ವಾಮನ ಪುರಾಣ ಹೇಳುತ್ತದೆ. ಕಾಮವೆಂಬುದು ಅಗ್ನಿಯಂತೆ. ಈ ಅಗ್ನಿ ಉರಿಯತೊಡಗಿತೆಂದರೆ, ಆ ಅಗ್ನಿಧರ್ಮರೂಪದ್ದಾಗಿ ಉರಿದರೆ ದೋಷವಿಲ್ಲ, ಹದ್ದು ಭಗಭಗಿಸಲು ತೊಡಗಿತೆಂದರೆ ಭಸ್ಮಗೊಳಿಸಿಬಿಡುತ್ತಗೆ.

ಸತ್ಪಥದಿಂದ ಜಾರಿಸುವುದೇ ಕಾಮಭಾವನೆಯು. ಹೀಗಾಗಿ 'ನ ಕಾಮ ಸದೃಶೋ ರಿಪುಃ' ಕಾಮದಂತಹ ಶತ್ರು ಬೇರೆ ಇಲ್ಲ ಎಂದೂ ಹೇಳಿದ್ದಿದೆ. ಗಾಳಿ ಹೇಗೆ ನೀರಿನಲ್ಲಿ ದೋಣಿಯನ್ನು ಎಳೆದುಕೊಂಡು ಹೋಗುತ್ತದೋ, ಅದೇ ರೀತಿ ಇಂದ್ರಿಯ ಸುಖದ ಬೆನ್ನ ಹಿಡಿದಿರುವ ಮನಸ್ಸು, ಬುದ್ಧಿಯನ್ನು ಎಳೆದುಕೊಂಡು ಹೋಗಿ ಸುಳಿಯಲ್ಲಿ ಸಿಲುಕಿಸುತ್ತದೆ. ಕಾಮಭಾವನೆ ಪ್ರಬಲವಾದಷ್ಟು ಬುದ್ಧಿನಾಶವಾಗುತ್ತದೆ. ಗೀತೆ ಹೇಳುತ್ತದೆ. ಸಂಗದಿಂದ ಕಾಮ ಉದ್ಭವಿಸುತ್ತದೆ. ಈ ಕಾಮಭಾವನೆ ಯಾವುದಕ್ಕೆ ಸಂಬಂಧಿಸಿ ಉದ್ಭವಿಸಿದೆಯೋ, ಅದು ದೊರಕದಿದ್ದರೆ ಕ್ರೋಧ ಉತ್ಪನ್ನವಾಗುತ್ತದೆ; ಕ್ರೋಧದಿಂದ ಅವಿವೇಕ, ಅವಿವೇಕದಿಂದ ಬುದ್ಧಿನಾಶವಾಗುತ್ತದೆ; ಬುದ್ಧಿನಾಶದಿಂದ ಸರ್ವನಾಶವಾಗುತ್ತದೆ.

ಕಾಮ ಅತ್ಯಂತ ಆಕರ್ಷಕ. ಎಲ್ಲರನ್ನು ಅದು ತನ್ನ ಅಪ್ಪುಗೆಯಲ್ಲಿ ಸೆಳೆದುಕೊಳ್ಳುತ್ತದೆ. ಈ ಆಲಿಂಗನ ಮಾತ್ರ ಧೃತರಾಷ್ಟ್ರಾಲಿಂಗನ; ಪುಡಿ ಪುಡಿಮಾಡಿಬಿಡುತ್ತದೆ. ಬೇಡನು ಜಿಂಕೆಯನ್ನು ಹಿಡಿದುಕೊಲ್ಲುವ ಮೊದಲು ಮಧುರನಾದದಿಂದ ಅದನ್ನು ಆಕರ್ಷಿತಗೊಳಿಸುವಂತೆ, ನಾವು ಯಾರನ್ನ ಕೆಡುಕು ಮಾಡಬೇಕೆಂದು ಬಯಸುತ್ತೇವೆಯೋ ಅವರನ್ನು ಮೊತ್ತ ಮೊದಲು ಸಂತೋಷಗೊಳಿಸಬೇಕು ಎಂದೊಂದು ಸುಭಾಷಿತದಲ್ಲಿ ಹೇಳಿದಂತೆ ಕಾಮ ಎಂಬುದೂ ಒಬ್ಬ ಬೇಡನಂತೆಯೇ. ಅದು ಮಾನವನಿಗೆ ಮೊದಮೊದಲು ಮುದಗೊಳಿಸುತ್ತ ಕೊನೆಗೆ ಸರ್ವನಾಶ ಮಾಡುತ್ತದೆ.

ಕಾಮವೆಂಬುದಿದು ಒಂದು ರೀತಿಯ ಕಾಯಿಲೆ – 'ನಾಸ್ತಿ ಕಾಮಸಮೋವ್ಯಾಧಿಃ' – ಕಾಮಕ್ಕೆ ಸಮಾನವಾದ ಬೇರೆ ರೋಗ





ಇಲ್ಲ ಎಂದು ಚಾಣಕ್ಯ ನೀತಿಯಲ್ಲಿ ಉಗ್ರತೆಯನ್ನು ತೋರಿಸಿಕೊಟ್ಟಿದೆ. ಭವಭೂತಿಯು ಬಾಯಾರಿಕೆಯಿಂದ ಬಾಯಿ ಒಣಗಿದಾಗ ಮಾನವನು ಪರಿಮಳದ ಒಳ್ಳೆಯ ಸಿಹಿ ನೀರು ಕುಡಿಯುತ್ತಾನೆ' ಹಸಿವಿನಿಂದ ಕಣ್ಣುಕತ್ತಲೆಬಂದಾಗ ಅನ್ನಕಲಸಿ ಹೊಟ್ಟೆತುಂಬ ಉಣ್ಣುತ್ತಾನೆ, ಕಾಮವಿಕಾರವಾದಾಗ ಹೆಂಡತಿಯನ್ನು ಅಪ್ಪಿ ಹಿಡಿಯುತ್ತಾನೆ. ಬಾಯಾರಿಕೆ, ಹಸಿವು ಮತ್ತು ಕಾಮವೆಂಬ ರೋಗಗಳ ಉಪಚಾರ ಕುಡಿಯುವುದು, ಉಣ್ಣುವುದು ಭೋಗಿಸುವುದು – ಇವೇ ಸುಖವೆಂದು ಮಾನವನು ಭ್ರಮೆ ಹೊಂದುತ್ತಾನೆ. ದೇಹಕ್ಕೆ ಮತ್ತು ಮನಸ್ಸಿಗೆ ಉಂಟಾಗುವ ದುಃಖದ ಚಪಲತೆಗಳನ್ನು ನಿವಾರಣೆ ಮಾಡಲು ಇದೆಲ್ಲವನ್ನು ಮಾಡುತ್ತಾನೆ. ಆದರೆ ಇದು ನಿಜವಾದ ಸುಖವಲ್ಲ; ನಿಜವಾದ ತನ್ನ ಅಂತಃಕರಣದಲ್ಲಿ ಅಡಗಿಕೊಂಡು ಇದೆ ಎಂದು ಹೇಳಿದ ನುಡಿಗಳಲ್ಲಿ ಕಾಮದ ಭೋಗವೆಂಬುದೊಂದು ರೋಗವೆಂದು ಹೇಳಿರುವುದು ಮನನೀಯವಾಗಿದೆ.

ಹೊಗೆಯಿಂದ ಬೆಂಕಿ, ಕೊಳೆಯಿಂದ ಕನ್ನಡಿ, ಜರಾಯುವಿನಿಂದ ಗರ್ಭ ಹೇಗೆ ಮುಚ್ಚಿಕೊಂಡಿರುತ್ತದೋ ಹಾಗೆಯೇ ಜ್ಞಾನಿಗಳಿಗೆ ನಿತ್ಯ ವೈರಿಯಾಗಿರುವ, ಯಾವ ಕಾಲಕ್ಕೂ ತೃಪ್ತಿಗೊಳಿಸಲು ಸಾಧ್ಯವೇ ಆಗದ ಈ ಕಾಮವೆಂಬ ಅಂಧಃಕಾರದಿಂದ ಜ್ಞಾನಜ್ಯೋತಿಯ ಪ್ರಕಾಶ ಕಾಣಲು ಬಾರದಂತೆ ಮುಚ್ಚಿರುತ್ತದೆ. ಜ್ಞಾನಜ್ಯೋತಿಯ ಪ್ರಕಾಶ ಪ್ರಕಟವಾಗಬೇಕಾದರೆ ಕಾಮದ ಆವರಣವನ್ನು ಹರಿದು, ಕಿತ್ತೊಗೆಯಬೇಕು. ಈ ಆವರಣವನ್ನು ಕಿತ್ತೊಗೆಯದೆ ಹಾಗೆಯೇ ಬಿಟ್ಟರೆ, ಜ್ಞಾನಜ್ಯೋತಿ ಆರಿಹೋಗಿ ಮಾನವನು ಮೂರ್ಖ, ಮೂಢ, ಹುಚ್ಚನಾಗಿ, ನಿಷ್ಕ್ರಿಯನಾಗಿ, ನಿಷ್ಪ್ರಯೋಜಕನಾಗಿ ನಾಶವಾಗುತ್ತಾನೆ. ಅದಕ್ಕಾಗಿಯೇ ಬಸವಣ್ಣನವರು 'ವಿಷಯವೆಂಬ ಪಸುರೆನ್ನ ಮುಂದೆ ಪಸರಿಸದಿರಯ್ಯ' ಎಂದು ಪ್ರಾರ್ಥಿಸಿದ್ದರು.

'ಉಪಭುಕ್ತಂ ವಿಷಂ ಹನ್ತಿ ವಿಷಯಾಃ ಸ್ಮರಣಾದಪಿ '' – ವಿಷ ಕುಡಿದರೆ ಮಾತ್ರ ಸಾಯಿಸುತ್ತದೆ; ಆದರೆ ವಿಷಯ (ಇಂದ್ರಿಯಸುಖ) ಸ್ಮರಣ ಮಾತ್ರದಿಂದಲೇ ಸಾಯಿಸುತ್ತದೆ ಎಂದು ಮಹಾಭಾರತ ಸಾರಿ ಹೇಳಿದೆ.

ಹೀಗೆಲ್ಲ ಆಗುತ್ತಿದೆ ಎಂದಾದರೆ ಕಾಮವನ್ನು ಭೋಗಿಸಲೇ ಬಾರದೆ ಎಂಬ ಪ್ರಶ್ನೆ ಏಳಬಹುದು. ಕಾಮವನ್ನು ಭೋಗಿಸಲೇ ಬಾರದೆಂದೇನೂ ಇಲ್ಲ. ಕಾಮ ಧರ್ಮಾಧಾರಿತವಾಗಿ ಭೋಗಿಸಬೇಕೇ ಹೊರತು ಅದರ ಹುಚ್ಚು ಹಿಡಿಯಬಾರದು. ಧರ್ಮ-ಅರ್ಥ-ಕಾಮ-ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಕಾಮವೂ ಒಂದಿದೆ. ಪುರುಷಾರ್ಥ ಸಾಧನೆಯಲ್ಲಿ ಕಾಮವೂ ಒಂದಿದೆ ಎಂದು ಅದರ ಸಾಧನೆ ಮಾಡಬೇಕೆಂದು ಅದರಲ್ಲಿಯೇ ಮುಳುಗಿರದೆ ಧರ್ಮಾಧಾರಿತವಾಗಿ ಮಾತ್ರ ಭೋಗಿಸಬೇಕು. ಇಂದು ನಾವು ಏಡ್ಸ್ ರೋಗದ ವಿಷಯದಲ್ಲಿ ಪ್ರತಿದಿನ ಕೇಳುತ್ತ ಇದ್ದೇವೆ. ಇದಕ್ಕೆ ಕಾರಣ ಧರ್ಮಾಧಾರಿತವಲ್ಲದ ಅತಿರೇಕ ಕಾಮವೇ ಕಾರಣ ಎಂಬುದು ಎಲ್ಲರೂ ಬಲ್ಲರು. ಅಂದ ಮೇಲೆ ಇದು ನರಕದ ದ್ವಾರವೆಂಬುದು ನಿಶ್ಚಿತವಲ್ಲವೆ! ನಮ್ಮ ಪೂರ್ವಿಕರು ಋಷಿಮುನಿಗಳು ಶರಣರು ಎಲ್ಲರೂ ಇದನ್ನು ಮನಗಂಡೇ ಪರವಧುವನ್ನು ತಾಯಿಯನ್ನು ಸಮಾನವಾಗಿ ಕಾಣಬೇಕೆಂದು ಹೇಳಿದುದರ ಅಂತರಾರ್ಥ ಇದೇ ಅಲ್ಲವೇ!

'ಪರಸ್ತ್ರೀ, ಪರಧನವೆಂಬೀ ಜೂಬಿಂಗಂಜುವೆ' ಎಂದು ಹೇಳಿದ ಬಸವಣ್ಣನವರ ನುಡಿ ಸದಾ ಚಿತ್ತದಲ್ಲಿ ಧ್ವನಿಸುತ್ತಿರಲಿ.

'ಸಾಸುವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖನೋಡಾ'' (ಅಲ್ಲಮಪ್ರಭು)

''ಕಾಮಸತ್ಯವ ತಿಂದಿತ್ತು''

*(ಮುಂದುವರಿಯುತ್ತದೆ)* ★

**ಶ್ರೀವಾಣಿ**

ಸ್ವಾತಂತ್ರ್ಯ ಬಂದು ಬಹಳ ವರ್ಷಗಳಾದರೂ ನಾವು ನಿರೀಕ್ಷಿಸಿದ ಗುರಿಯನ್ನು ಮುಟ್ಟಲಾಗಿಲ್ಲ. ಅನೇಕ ವಿಧವಾದ ಕಾರ್ಯ ಸಾಧನೆಯನ್ನು ಮಾಡಿದ್ದೇವೆ. ಮಾಡಬೇಕಾಗಿರುವುದನ್ನು ವಿಮರ್ಶಿಸಿದಾಗ ಗುರಿ ಜನತೆಯ ಮಟ್ಟವನ್ನು ಮುಟ್ಟಬೇಕಾಗಿತ್ತು ಎನ್ನಿಸುತ್ತದೆ, ಆದರೆ ಜನರ ಬಯಕೆಗಳನ್ನು ಪೂರ್ತಿಗೊಳಿಸಲು ಇಂದೂ ಸಾಧ್ಯವಾಗಲಿಲ್ಲ, ಸಮರ್ಥವಾಗಿಲ್ಲ. ಎಲ್ಲೆಲ್ಲೂ ಮಂಕು ವಾತಾವರಣ, ನಿರುತ್ಸಾಹ, ಆಹಾರದ ಅಭಾವ, ಅಜ್ಞಾನ, ಅಶಾಂತಿ, ಗೊಂದಲ ತಾಂಡವವಾಡುತ್ತಿದೆ. ಭಾರತ ಯಾವ ಸ್ವಾರ್ಥವನ್ನ ಹತ್ತಿಕ್ಕಿತ್ತೊ, ತೊಡೆದುಹಾಕಿತ್ತೊ ಅದೇ ಇಂದು ಬೃಹದಾಕಾರವಾಗಿ ಮುಂದಾಗಿ ಮೈಕೊಡವಿ ರಾಕ್ಷಸನಂತೆ ಎದ್ದು ಹಾಹಾಕಾರವನ್ನು ಮಾಡುತ್ತಿರುವುದನ್ನು ನಾವು ಕಾಣುತ್ತೇವೆ.



## ಶರಣರು ಕಂಡಂತೆ ದೇವರ ಸ್ವರೂಪ

- ಬಿ.ಎಸ್. ಗಂಗನಳ್ಳಿ
ಮುದ್ದೇಬಿಹಾಳ, ಬಿರ್ಚನಕಲ್ಲ ಅಂಚೆ
ಮುದ್ದೇಬಿಹಾಳ ತಾ., ಬಿಜಾಪೂರ ಜಿಲ್ಲೆ

"ದೇವನೊಬ್ಬ ನಾಮ ಹಲವು" ಎಂಬ ಉಕ್ತಿಯಂತೆ, ಜಗದ್ವ್ಯಾಪಿಯಾದ ದೇವರು ಒಬ್ಬನೇ. ಆದರೆ ಅವರವರ ಭಾವಕ್ಕೆ, ಭಕ್ತಿಗೆ ತಕ್ಕಂತೆ ದೇವರ ಸ್ವರೂಪ ಹಲವು ನಾಮ, ರೂಪಗಳನ್ನು ಪಡೆದುಕೊಂಡಿದೆ. ಹಲವಾರು ಸಂತರು, ಜ್ಞಾನಿಗಳು, ಅನುಭಾವಿಗಳು ತಮ್ಮ-ತಮ್ಮ ಅನುಭವಕ್ಕೆ ಹೊಳೆದಂತೆ ದೇವರಸ್ವರೂಪವನ್ನು ವರ್ಣಿಸಿದ್ದಾರೆ. ಹಾಗೆಯೇ ಅನುಭಾವಿಗಳಾದ ಶರಣರು ಭಕ್ತಿ ಮಾರ್ಗದಲ್ಲಿ ನಡೆದವರು. ಈ ಭಕ್ತಿಮಾರ್ಗವನ್ನು ಸಾಧಿಸಲು ಅವರು ತಮ್ಮ ನಿತ್ಯಜೀವನವನ್ನೇ ತಳಹದಿಯನ್ನಾಗಿಟ್ಟುಕೊಂಡು ಶಿವತತ್ವಚಿಂತನೆಯಲ್ಲಿ ತೊಡಗಿದರು. ಸೃಷ್ಟಿಯ ಸಚರಾಚರ ವಸ್ತುಗಳಲ್ಲಿ ಶಿವನನ್ನು ಅರಸುತ್ತಾ ಸಾಗಿದರು. ತಾವು ಕಂಡ ಶಿವಸ್ವರೂಪವನ್ನು ದೇವರ ಇರುವಿಕೆಯನ್ನು ಹಲವಾರು ವಚನಗಳ ಮೂಲಕ ಅನೇಕ ಉಪಮೆ, ದೃಷ್ಟಾಂತಗಳ ಮೂಲಕ ಹೇಳಿದ್ದಾರೆ. ತತ್ವಜಿಜ್ಞಾಸೆಯತ್ತ ವಿವೇಚಿಸುತ್ತಾ ಅಲ್ಲಮಪ್ರಭುಗಳು ದೇವರ ನಿಲುವನ್ನು ಕುರಿತು ಹೀಗೆ ಎಂದಿದ್ದಾರೆ :

*"ಆದಿ ಅನಾದಿ ಇಲ್ಲದಂದು, ಹಮ್ಮು-ಬಿಮ್ಮು ಇಲ್ಲದಂದು*
*ಸುರಾಳ-ನಿರಾಳ ಇಲ್ಲದಂದು, ಶೂನ್ಯ-ನಿಶ್ಶೂನ್ಯವಿಲ್ಲದಂದು*
*ಸಚರಾಚರವೆಲ್ಲಾ ರಚನೆಗೆ ಬಾರದಂದು*
*ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ"*

ಸೃಷ್ಟಿ ರಚನೆಗಿಂತ ಮುನ್ನವೇ ಶಿವಸ್ವರೂಪವಿತ್ತೆಂದು ಆ ಅಮೂರ್ತ ಸ್ವರೂಪವೇ ದೇವರೆಂದು ಹೇಳಿದ್ದಾರೆ. ಹಾಗೆಯೇ "ಉರಲಿಂಗಪೆದ್ದಿ" ಎಂಬ ಶರಣರು ಒಂದು ವಚನದಲ್ಲಿ ಹೀಗೆ ಶಿವಸ್ವರೂಪದ ವರ್ಣನೆ ಮಾಡಿದ್ದಾರೆ.

*"ಶಿವಜಗವಾಗಬಲ್ಲ; ಜಗವಾಗದಿರಲೂ ಬಲ್ಲ;*
*ಶಿವರೂಪಾಗಬಲ್ಲ; ಶಿವರೂಪಾಗದಿರಲೂ ಬಲ್ಲ;*
*ಶಿವ ಅಜಾಂಡಕೋಟಿಗಳ ಮಾಡಬಲ್ಲ; ಮಾಡದಿರಲೂ ಬಲ್ಲ;*
*ಶಿವಕೆಡಿಸಬಲ್ಲ; ಕೆಡಿಸದಿರಲೂಬಲ್ಲ;*
*ಶಿವ ಜಂಗಮವಾಗಿ ಪೂಜಿಸಬಲ್ಲ;*
*ಶಿವಲಿಂಗವಾಗಿ ತಾನೆ ಪೂಜೆಯ ಕೈಕೊಳ್ಳಲೂಬಲ್ಲ;"*

ಸರ್ವಶಕ್ತ, ಸರ್ವವ್ಯಾಪಿಯಾದ ಶಿವನು ಜಗತ್ತನ್ನು ತಾನೇ ನಿರ್ಮಿಸಬಲ್ಲ, ಜಗತ್ತಿನ ತುಂಬ ವ್ಯಾಪಿಸಬಲ್ಲ. ಆದರೂ ಜಗತ್ತಿನ ಬಂಧನಕ್ಕೆ ಸಿಲುಕದೆ ಜಗತ್ತನ್ನು ಮೀರಿ ನಿಂತ ಆತನ ನಿಲುವು ವಿಚಿತ್ರಮಯ ಎಂದಿದ್ದಾರೆ. ಅದೇ ರೀತಿ ಶಿವಯೋಗಿ ಸಿದ್ಧರಾಮ ತಮ್ಮ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

*"ಬೀಜವೃಕ್ಷ ನ್ಯಾಯದಂತೆ ನೀನಿಪ್ಪೆಯಯ್ಯಾ*
*ನಿರಾಕಾರವೇ ಮೂರ್ತಿಯಾಗಿ*
*ಮೂರ್ತಿಯೇ ನಿರಾಕಾರವಾಗಿ*
*ಇವೆಲ್ಲವನಳಿದ ಬಯಲಾಗಿಪ್ಪೆ*
*ಎನ್ನ ಕಪಿಲಸಿದ್ಧಮಲ್ಲಿಕಾರ್ಜುನದೇವ"*

ಬಯಲು ಬಯಲಾದ, ನಿರಾಕಾರ-ನಿರಂಜನ ಸ್ವರೂಪವನ್ನು "ಬೀಜವೃಕ್ಷ ನ್ಯಾಯದಂತೆ" ಎಂಬ ಉಪಮೆ ಕೊಟ್ಟು ವರ್ಣಿಸಿದ್ದಾರೆ. ವಿಶ್ವವ್ಯಾಪಿಯಾದ ಶಿವನು ಭಕ್ತನ ಕರಸ್ಥಲಕ್ಕೆ ಚುಳುಕಾದ ಲಿಂಗರೂಪವಾಗಿ ಬಂದ ಬಗೆಯನ್ನು ಭಕ್ತಿ ಭಂಡಾರಿ ಬಸವಣ್ಣನವರು ಒಂದು ವಚನದಲ್ಲಿ ದೃಷ್ಟಾಂತ ರೂಪದಲ್ಲಿ ಹೇಳಿದ್ದಾರೆ.

*"ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ*
*ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ*
*ಅಗಮ್ಯ ಅಗೋಚರ ಅಪ್ರತಿಮಲಿಂಗವೇ*
*ಎನ್ನಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ ಕೂಡಲಸಂಗಮದೇವಾ"*

ಹಾಗೆಯೇ ಇನ್ನೊಂದು ವಚನದಲ್ಲಿ -

"ಎತ್ತೆತ್ತ ನೋಡಿದಡತ್ತ ನೀನೇ ದೇವಾ
ಸಕಲವಿಸ್ತಾರದ ರೂಹು ನೀನೇ ದೇವಾ
ವಿಶ್ವತಃ ಚಕ್ಷು ನೀನೇ ದೇವಾ, ವಿಶ್ವತಃ ಮುಖ ನೀನೇ ದೇವಾ
ವಿಶ್ವತಃ ಬಾಹು ನೀನೇ ದೇವಾ, ವಿಶ್ವತಃ ಪಾದ ನೀನೇ ದೇವಾ
ಕೂಡಲಸಂಗಮದೇವಾ"

ಸರ್ವತ್ರದರಲ್ಲಿ ದೈವತ್ವವನ್ನು ಕಂಡ ಬಸವಣ್ಣನವರು ಶಿವನ ವಿರಾಟಸ್ವರೂಪವನ್ನು ನಾನಾ, ಶಬ್ದಚಿತ್ರಗಳ ಮೂಲಕ ವರ್ಣಿಸಿದ್ದಾರೆ.

ದೇವರನ್ನೇ ಪತಿಯನ್ನಾಗಿ ಮಾಡಿಕೊಂಡ ಅನುಭಾವಿ ಅಕ್ಕಮಹಾದೇವಿ ಯಂತೂ ಸಕಲ ಪ್ರಾಣಿ-ಪಕ್ಷಿ, ಗಿಡ-ಮರ, ತರು-ಲತೆಗಳಲ್ಲಿ ದೇವರ ಸ್ವರೂಪವನ್ನು ಕಂಡು ವರ್ಣಿಸಿದ ರೀತಿ ಮನನೀಯವಾಗಿದೆ.

*"ವನವೆಲ್ಲಾ ನೀವೇ, ವನದೊಳಗಣ ದೇವತರುವೆಲ್ಲ ನೀವೆ*
*ತರುವಿನೊಳಗಾಡುವ ಮೃಗವೂ ನೀವೇ ಚೆನ್ನಮಲ್ಲಿಕಾರ್ಜುನ*
*ಸರ್ವಭರಿತನಾಗಿ ಎನಗೆ ಮುಖದೋರಾ"*

ಎಂದು ನಿವೇದಿಸಿಕೊಂಡಿದ್ದಾಳೆ. ಸಾವಿಲ್ಲದ ಕೇಡಿಲ್ಲದ, ಭವವಿಲ್ಲದ ಭಯವಿಲ್ಲದ, ಕುಲಸೀಮೆಯಿಲ್ಲದ ನಿಸ್ಸೀಮ ಚಲುವನಾದ ಚನ್ನಮಲ್ಲಿಕಾರ್ಜುನನಿಗೆ ಅವಳು ಮನಸೋತು ಒಲಿದ ರೀತಿ ಇನ್ನೂ ಮನೋಜ್ಞವಾಗಿದೆ. ಹೀಗೆ ಶರಣರು ಕಂಡ ದೇವರ ಸ್ವರೂಪ ಸತ್ಯನಿಷ್ಠ, ತತ್ವನಿಷ್ಠ, ಅನುಭಾವನಿಷ್ಠ, ಆತ್ಮನಿಷ್ಠವಾಗಿದೆ. ಜ್ಞಾನದಪ್ರತೀಕವಾಗಿ ವೈಶಿಷ್ಟ್ಯಪೂರ್ಣವೆನಿಸಿದೆ. ★





## ಪುಸ್ತಕ ಸಂಸ್ಕೃತಿ

– ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ
ಭಾಷಾಂತರ ನಿರ್ದೇಶನಾಲಯ,
ಕಾವೇರಿ ಭವನ, ಎಫ್. ಬ್ಲಾಕ್
ಬೆಂಗಳೂರು-560 009.

ಒಂದು ಕಾಲದಲ್ಲಿ, ಯಾರಾದರೂ ಪುಸ್ತಕಗಳ ಬಗೆಗೆ ಉಪೇಕ್ಷೆತೋರ್ಪಡಿಸಿದಾಗ 'ಅವನಿಗೆ ಸಂಸ್ಕೃತಿ ಅನ್ನುವುದೇ ಇಲ್ಲ' ಎನ್ನುವಂತಹ ಗಂಭೀರವಾದ ಟೀಕೆಗೆ ಗುರಿಯಾಗುತ್ತಿದ್ದ ದಿನಗಳಿದ್ದವು. ಯಾಕೆಂದರೆ ಪುಸ್ತಕಗಳು ಮನುಷ್ಯನಿಗೆ ಹೊತ್ತುಗಳೆಯಲು ಇರುವ ಸಾಧನವಾಗಿರದೇ ವ್ಯಕ್ತಿಯ ಸದಭಿರುಚಿಯ ಸಂಕೇತಗಳಾಗಿ, ಅವುಗಳು ಉತ್ತಮ ಸ್ನೇಹಿತರ ಒಡನಾಟದಷ್ಟೇ ಸೊಗಸಾದ ಅನುಭವ ನೀಡಿದ ನಿದರ್ಶನಗಳೂ ಬೇಕಾದಷ್ಟು ಇರುತ್ತಿದ್ದವು.

ಸಂಸ್ಕೃತಿ ಮತ್ತು ನಾಗರೀಕತೆಗಳ ಬಗೆಗೆ ವಿಚಾರ ಪರರಾದಾಗ ತಟ್ಟನೇ ಅವುಗಳ ಹಿಂದೆ ಆಯಾ ಜನಾಂಗಗಳ ಭಾಷೆ - ಸಾಹಿತ್ಯಗಳೂ ಗಮನ ಸೆಳೆಯುತ್ತವೆ. ಭಾಷೆ ಒಂದು ಜನಾಂಗದ ನಾಲಿಗೆಯಾದಂತೆಯೇ ಆಯಾ ಜನಾಂಗದ ಸಾಹಿತ್ಯ - ಸಂಸ್ಕೃತಿಗಳು ಹೃದಯ ಭಾಗವಾಗಿ ದಾಖಲಾಗುತ್ತವೆ. ಕಾಲಾಂತರದಲ್ಲಿ ಅಂಥ ಪುಸ್ತಕಗಳೇ ಜನಾಂಗೀಯ ಬದುಕಿನ ಅಪೂರ್ವ ದಾಖಲೆಗಳಾಗಿ ನಿಂತು, ಸಾರ್ವತ್ರಿಕ ಮೌಲ್ಯವನ್ನು ಹಿಡಿದಿಟ್ಟ ಶಾಶ್ವತ ಸಂಪುಟಗಳಾಗಿ ಬಿಡುತ್ತವೆ.

ವೃತ್ತಿಯಿಂದ ವೈದ್ಯರಾಗಿದ್ದ ನನ್ನೂರಿನ ಹಳೆಯ ರಾಜಕಾರಣಿಯೊಬ್ಬರು ಆಗಾಗ ನನಗೆ ಹೇಳುತ್ತಿದ್ದ ಮಾತು : ಜೀವನದಲ್ಲಿ ತಾವು ಗಳಿಸಿದ್ದು ಎರಡೇ ಎರಡು ಆಸ್ತಿ - ಪುಸ್ತಕ ಹಾಗೂ ಬಟ್ಟೆ ಎಂದು. ದಿನಕ್ಕೊಂದು ರೀತಿಯ ವಸ್ತ್ರವೈವಿಧ್ಯವನ್ನು ಮೆರೆಯುತ್ತಿದ್ದ ಅವರು ಸಾಮಾನ್ಯರ ಕಣ್ಣಿಗೆ 'ಶೋಕೀಲಾಲ'ರಾಗಿ ಕಂಡರೆ; ಅವರ ಮನೆಯಲ್ಲಿದ್ದ ಅಪಾರವಾದ ಪುಸ್ತಕ ಭಂಡಾರವನ್ನು ನೋಡಿದರೆ ಅವರೊಬ್ಬ ಬುದ್ಧಿವಂತ ಚಿಂತಕರಂತೆ ತೋರುತ್ತಿದ್ದರು. ಅವರ ಆ ಎರಡೂ ಗುಣಗಳನ್ನು ತಾಳೆ ಹಾಕಿ ನೋಡಿದಾಗ ನನಗೆ ಅದು 'ನೆಹರೂ ಆದರ್ಶ'ವಾಗಿ ಕಾಣುತ್ತಿತ್ತು, ಎಷ್ಟೇ ಆದರು ಅವರು ಬದುಕಿದ್ದು ನೆಹರು ಯುಗದಲ್ಲಿ.

ಪಂಡಿತ್ ನೆಹರೂ ಅವರನ್ನೇ ಗಮನಿಸಿದರೆ, ಅವರು ಬರೀ ರಾಜಕಾರಣಿ ಮಾತ್ರವಲ್ಲ ಉತ್ತಮ ಲೇಖಕರೂ ಆಗಿದ್ದರಲ್ಲವೆ ? ಅವರಂತೆಯೇ ಬಾಲಗಂಗಾಧರತಿಲಕ್, ಡಾ|| ಎಸ್. ರಾಧಾಕೃಷ್ಣನ್, ಅಬುಲ್ ಕಲಮ್ ಆಜಾದ್, ಅಂಬೇಡ್ಕರ್, ರಾಜಾಜಿ, ಲೋಹಿಯಾ, ಮೊದಲಾದ ರಾಷ್ಟ್ರನಾಯಕರುಗಳು ರಾಜಕೀಯ ಪಟುಗಳಷ್ಟೇ ಅಲ್ಲ, ಸ್ವತಃ ಸಾಹಿತಿಗಳೂ ಆಗಿದ್ದರು. ರಾಜಕಾರಣಿಗಳು ಪುಸ್ತಕ ಬರೆಯುವಷ್ಟು ಪ್ರತಿಭಾವಂತರಾಗಿರದಿದ್ದರೂ, ಪುಸ್ತಕ ಓದುವ ಹವ್ಯಾಸವನ್ನಾದರೂ ಇಟ್ಟುಕೊಂಡಿದ್ದರೆ, ಅವರ ರಾಜಕೀಯ ಜೀವನಕ್ಕೆ ವಿಶೇಷ ಗಾಂಭೀರ್ಯ ಒದಗುತ್ತದೆನ್ನುವುದು ಬಹಳಷ್ಟು ಜನ ಮೇಧಾವಿಗಳ ಅನುಭವದ ಮಾತು.

ಪುಸ್ತಕಗಳು ಉತ್ತಮ ಸಂಸ್ಕೃತಿಯ ಲಕ್ಷಣವೆನ್ನುವುದಕ್ಕೆ, ಯಾರಾದರೂ ಗಣ್ಯರ ಮನೆಯೊಳಗೆ ಕಾಲಿಟ್ಟ ಕೂಡಲೇ ಎದುರಿಗೆ ಕಪಾಟನಲ್ಲಿ ಒಪ್ಪವಾಗಿ ಜೋಡಿಸಿಟ್ಟ ಪುಸ್ತಕಗಳೂ ಅವರ ಉತ್ತಮ ಅಭಿರುಚಿಯನ್ನು ಸಾರುವಂತೆ ಕಳಶಪ್ರಾಯವಾಗಿರುತ್ತಿದ್ದವು. ಆಗಾಗ ಒಡನಾಡಿಗಳ ಜೊತೆ ತಮ್ಮ ಸಂಗ್ರಹದಲ್ಲಿ ಇಷ್ಟುಸಾವಿರ ಪುಸ್ತಕಗಳಿವೆ, ಅಷ್ಟು ಸಾವಿರ ಪುಸ್ತಕಗಳಿವೆಯೆಂದು ಹೆಮ್ಮೆಯಿಂದ ಹೇಳಿಕೊಂಡು ಬೀಗುತ್ತಿದ್ದ ಸಂದರ್ಭಗಳೂ ಕಂಡು ಬರುತ್ತಿದ್ದವು. ಕ್ರಮೇಣ ನಾಗರೀಕತೆಗೆ ವೇಗ ಬಂದಂತೆ ವಿದ್ಯುನ್ಮಾನ ಧಾಳಿಯಿಕ್ಕಿದ ಮೇಲೆ, ಅನುಕೂಲಸ್ಥರ ಮನೆಯ ಟೀಪಾಯಿಯ ಮೇಲೆ ಬಣ್ಣದಲ್ಲಿ ಮುದ್ರಿತವಾದ ರಾಶಿ ರಾಶಿ ನಿಯತಕಾಲಿಕಗಳು ಬಿದ್ದಿರುತ್ತವೆ ಸುಮ್ಮನೆ. ಆಶ್ಚರ್ಯವೆಂದರೆ ಮನೆಯ ಸದಸ್ಯರಿಗೆ ಅದರಲ್ಲಿನ ಯಾವ ಪತ್ರಿಕೆಯ ಪುಟವನ್ನು ತೆರೆದು ನೋಡಲೂ ಪುರಸೊತ್ತಿಲ್ಲದೆ, ಆ ಪತ್ರಿಕೆಗಳು ಹೊಸದಾಗಿರುವಂತೆಯೇ, ಮಡಿಕೆ ಮಾಸದೆ - ಗರಿಗರಿಯಾಗಿಯೇ ಒಂದು ದಿನ ರದ್ದಿಯಂಗಡಿ ಸೇರುತ್ತವೆ. ಓದಲಾಗದಿದ್ದರೆ ದುಡ್ಡು ಖರ್ಚು ಮಾಡಿ ಪತ್ರಿಕೆಯನ್ನೇಕೆ ತರಿಸಬೇಕೆಂದು ಕೇಳಬಾರದು. ಅದು ಈಗ ನಾಗರೀಕ ಪ್ರಪಂಚದ ಒಣ ಪ್ರತಿಷ್ಠೆಯ ಹೆಗ್ಗುರುತಾಗಿರುತ್ತದಷ್ಟೇ.

ಪುಸ್ತಕ ಸಂಸ್ಕೃತಿಯ ಮೂಲಕ ದಾಖಲಾಗಬೇಕಾಗಿದ್ದ ವೈಜ್ಞಾನಿಕ, ವೈಚಾರಿಕ ಸಂಗತಿಗಳು ನಾಗರೀಕತೆಯ ಭೀಕರ ಅಂಧಾನುಕರಣೆಯ ಗಾಳಿಯಲ್ಲಿ ಕೊಚ್ಚಿ ಹೋಗುತ್ತಿರುವ ಪರಿಣಾಮವಾಗಿ ಇಂದು ಸುತ್ತಲೂ ಸುಶಿಕ್ಷಿತ ಮೂರ್ಖರ (educated fools) ಸಂತೆಯೇ ನೆರೆಯುತ್ತಲಿದೆ. ಸಂಸ್ಕೃತಿಯ ತಿರುಳಿಲ್ಲದ ನಾಗರೀಕತೆ ಟೊಳ್ಳು ಮರದಂತೆ ಬಹುಬೇಗ ಹರಡಿಕೊಂಡು ಬೆಳೆದು ಹೊರಗೆ ಆಕರ್ಷಕವಾಗಿ ಕಾಣುತ್ತದೆ. ಅಷ್ಟೇ ಬೇಗ ಅದು ಲಯವಾಗಿ ಹೋಗುವ ಸಾಧ್ಯತೆಯು ಇರುತ್ತದೆ. ಅದಕ್ಕಾಗಿಯೇ, ಯಾವುದೇ ಜನಾಂಗ 'ಪುಸ್ತಕ ಸಂಸ್ಕೃತಿ' ಯಿಂದ ವಂಚಿತರಾಗದಂತೆ ನಿಗಾವಹಿಸಬೇಕಾದ ಜರೂರು ಈಗ ತುಂಬ ಇದೆ.

ಆಧುನಿಕ ಪ್ರಪಂಚದಲ್ಲಿ ನಮಗರಿವಿಲ್ಲದಂತೆಯೇ ಹತ್ತಾರು ಚಟಗಳಿಗೆ ದಾಸರಾಗುವ ನಾವುಗಳು, ಪ್ರಯತ್ನ ಪೂರ್ವಕವಾಗಿ ಪುಸ್ತಕ ಓದುವ ಚಟವನ್ನು ಬೆಳೆಸಿಕೊಂಡರೆ, ಅದರಿಂದ ಹಾನಿಗಿಂತ ಲಾಭವೇ ಅಧಿಕವಾಗಿದೆಯೆಂಬುದನ್ನು ಮರೆಯಲಾಗದು. ಕನ್ನಡ ಕುಲಪುರೋಹಿತರೆಂದು ಕರೆಯುವ ಆಲೂರು ವೆಂಕಟರಾಯರು ಜನರಲ್ಲಿ ವಾಚನಾಭಿರುಚಿ ಹೆಚ್ಚಿಸಲು ಅನೇಕ ಆಸಕ್ತಗೆಳೆಯರ ನೆರವಿನಿಂದ ಧಾರವಾಡದಲ್ಲಿ ಒಂದು ಗ್ರಂಥಾಲಯ ನಡೆಸುತ್ತಿದ್ದರಂತೆ. ಒಂದು ಸಾರಿ ಅವರು ಏಳೆಂಟು ದಿನಗಳ ಮಟ್ಟಿಗೆ ಹೊರ ಊರಿಗೆ ಹೋಗಬೇಕಾದ ಪ್ರಸಂಗ ಬಂದಾಗ ಆಗಿನ್ನೂ ಹುಡುಗರಾಗಿದ್ದ ಬೇಂದ್ರೆಯವರಿಗೆ ಗ್ರಂಥಾಲಯ ತೆರೆದು ಕೊಂಡು ಕೂಡಲು ಹೇಳಿ ಕೀಲಿ ಕೈ ಕೊಟ್ಟು ಹೋದರಂತೆ, ಬೇಗನೇ ಕೆಲಸ ಮುಗಿದದ್ದರಿಂದ ಎರಡು ದಿನ ಮೊದಲೇ ಮರಳಿ ಬಂದು ನೋಡಲಾಗಿ, ಕೆಲವು ಅಮೂಲ್ಯ ಪುಸ್ತಕಗಳು ಮಾಯವಾಗಿದ್ದವು. ರಾತ್ರಿ ಅನಿರೀಕ್ಷಿತವಾಗಿ ಬೇಂದ್ರೆಯವರ ಕೋಣೆಯನ್ನು ಹೊಕ್ಕು ನೊಡಲಾಗಿ, ಗ್ರಂಥಾಲಯದ ಆ ಪುಸ್ತಕಗಳನ್ನು ಹರಡಿಕೊಂಡು ಕೂತು ಆತುರಾತುರವಾಗಿ ಓದಿ ಮುಗಿಸುವ ತರಾತುರಿಯಲ್ಲಿದ್ದ ಬೇಂದ್ರೆಯವರನ್ನು ಕಂಡು ವೆಂಕಟರಾಯರು ನಗುತ್ತಲೇ - ''ಕದ್ದು ಉತ್ತತ್ತಿ ತಿಂದ್ರ ಟಾನಿಕ್ ಆಗದ ಇರ್ತದೇನು?'' ಎಂದು ನುಡಿದು, ಹುಡುಗ ಬೇಂದ್ರೆಯವರಲ್ಲಿದ್ದ ಜ್ಞಾನದಾಹವನ್ನು ಕಂಡು ಉತ್ತೇಜಿಸಿದ್ದರಂತೆ !

ವಿದ್ಯುನ್ಮಾನ ಮಾಧ್ಯಮಗಳು ಸೃಜನಶೀಲತೆಯ ಮೇಲೆ ಕೆಟ್ಟ ಪರಿಣಾಮವನ್ನು ಉಂಟು ಮಾಡುವ ಸಾಧ್ಯತೆಯ ಬಗೆಗೆ ತಜ್ಞರು ಈಗಾಗಲೇ ಗಂಭೀರವಾಗಿ ಆಲೋಚಿಸುತ್ತಿದ್ದಾರೆ. ಶಿಕ್ಷಣ ಹಾಗೂ ವಾಣಿಜ್ಯ ವ್ಯವಹಾರ ಕ್ಷೇತ್ರಗಳಲ್ಲಿ ಕಂಪ್ಯೂಟರೀಕರಣದಿಂದ ಆಗಾಧವಾದ ಪ್ರಯೋಜನವಿರುವುದನ್ನು ಅಲ್ಲಗಳೆಯಲಾಗದು. ಆದರೆ ವಿಡಿಯೋ - ದೂರದರ್ಶನಗಳಂತಹ ಪ್ರಭಾವಿ ಪ್ರಸಾರ ಮಾಧ್ಯಮಗಳು ಕೆಲವೇ ಜನ ಬಂಡವಾಳ ಶಾಹಿಗಳ ಹಾಗೂ ಮುಂಬರುವ ಬಹುರಾಷ್ಟ್ರೀಯ ಕಂಪೆನಿಗಳ ಪೂರ್ಣ ಹಿಡಿತಕ್ಕೆ ಸಿಕ್ಕಿ, ದೇಶದ ಸಾಮಾಜಿಕ ಹಾಗೂ ಸಾಂಸ್ಕೃತಿಕ ವಲಯದ ಮೇಲೆ ಅಡ್ಡ ಪರಿಣಾಮ ಬೀರಬಾರದಷ್ಟೆ. ದೇಶದಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ಜಾಹೀರಾತು ನೀಡಿಕೆಯಿಂದ ಮೊದಲ್ಗೊಂಡು ಸ್ಥಳೀಯ ಕಂಪೆನಿಗಳು ಹೆಜ್ಜೆ ಹೆಜ್ಜೆಗೆ ಎದುರಿಸಬೇಕಾದ ಪ್ರತಿಸ್ಪರ್ಧೆಯನ್ನು ಊಹಿಸಿದರೇನೇ ನಡುಕವಾಗುತ್ತದೆ.

ದೈನಂದಿನ ಕೆಲಸ ಕಾರ್ಯಗಳಿಂದ ನಮ್ಮನ್ನು ಸಾಕಷ್ಟು ವಿಮುಖರನ್ನಾಗಿಸುತ್ತಲೇ ದೂರದರ್ಶನ, ಮಕ್ಕಳ ರಾತ್ರಿಯ ಓದಿನ ಸಮಯವನ್ನು ಕಬಳಿಸುತ್ತ ದಿನೇ ದಿನೇ ತನ್ನ ಬಾಹುಗಳನ್ನು ವಿಸ್ತರಿಸುತ್ತ ಹೊರಟ ಹಿನ್ನೆಲೆಯಲ್ಲಿ ಯೋಚನೆ ಮಾಡಿದರೆ ನಿಜವಾಗಿಯೂ ಆತಂಕವಾಗುತ್ತದೆ. ಹಾಗೆಂದು ಆತ್ಯಾಧುನಿಕ - ವೈಜ್ಞಾನಿಕ ಕೊಡುಗೆಯಾದ ಈ ಸೌಲಭ್ಯವನ್ನು ನಿರಾಕರಿಸುವ ಹಾಗೂ ಇಲ್ಲ. ಅಳಿಯುತ್ತಿರುವ ಕಲೆ - ಸಾಹಿತ್ಯ - ಸಂಸ್ಕೃತಿಗಳನ್ನು ವಿಡಿಯೋ ಮಾಧ್ಯಮದಲ್ಲಿ ಹಿಡಿದಿರುವ ಅಥವಾ ವಿಸಿಟಿಂಗ್ ಕಾರ್ಡ್ ಗಾತ್ರದ ಚಿಪ್‌ನಲ್ಲಿ ಹತ್ತಾರು ಸಂಪುಟ ಗಾತ್ರದ ಪುಸ್ತಕಗಳನ್ನು ದಾಖಲಿಸಿ ಕಾದಿಡುವಂತಹ ಸೌಲಭ್ಯಗಳೂ ಇವೆ. ಹೀಗಾಗಿ ಅವನ್ನು ಬಳಸಿಕೊಂಡಂತೆಯೇ 'ಪುಸ್ತಕ ಸಂಸ್ಕೃತಿ' ನಾಶವಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ಈಗ ಪ್ರತಿಯೊಬ್ಬರ ಮೇಲಿದೆ.

★

**ಶ್ರೀವಾಣಿ**

*ದೇಶದಲ್ಲಿ ಬಹಳ ಮಂದಿ ಕಷ್ಟ ಅನುಭವಿಸುವಾಗ ಶ್ರೀಮಂತರು ಖಡ್ಡಾಯವಾಗಿ ಸ್ವಯಂಪ್ರೇರಿತರಾಗಿ ಮುಂದೆ ಬಂದು ಬಡವರಿಗೆ ಸೇವೆ ಮಾಡುವುದು ಅವರ ಕರ್ತವ್ಯ. ತ್ಯಾಗ, ಸೇವೆ ಎಂದಾಕ್ಷಣವೇ ಸರ್ವಸ್ವವನ್ನೂ ನೀಡಿ ಬಿಕಾರಿಗಳಾಗಿ ಬೀದಿ ಪಾಲಾಗಬೇಕು ಎಂದರ್ಥವಲ್ಲ. ತಾವು ಉಂಡು ತಿಂದು, ತಮ್ಮ ಕೈಲಾದಷ್ಟನ್ನು ಇತರರಿಗೆ ಬಿಡುಗೈನಿಂದ ನೀಡಿದರೆ ಸಾಕು, ಅದೇ ಸೇವೆ. ಕಾಲ ಬದಲಾವಣೆಯಾಗುತ್ತಿದೆ. ಉತ್ತಮ ಸ್ಥಾನದಲ್ಲಿರುವವರು ಹಳ್ಳಿಗರ, ಬಡವರ, ದೀನದಲಿತರ ಉದ್ಧಾರಕ್ಕೆ ಮುಂದೆ ಬರಬೇಕು, ಇಲ್ಲದೆ ಹೋದರೆ ಸಾಮಾನ್ಯ ಜನರ ಹೃದಯ ನೊಂದು ಬೆಂದು ಕ್ರಾಂತಿಯಾದೀತು, ರಕ್ತ ಹರಿದೀತು. ಸ್ವಾರ್ಥ ಮುಂದುವರಿದರೆ ಮಹಾವಿಪತ್ತು ಸಂಭವಿಸೀತು.*







# ಸಂಗೀತದ ಖನಿ ಕೊಂಡಗುಳಿ ಕೇಶಿರಾಜ

– ಪ್ರೇಮಾಮಲ್ಲಣ್ಣ
೩ನೇ ಕ್ರಾಸ್, ಸೋಮೇಶ್ವರಪುರ,
ತುಮಕೂರು.

*"How charming is devine Philosophy !*
*Not harsh and crabbed as dull fools suppose,*
*But musical as is Appollo's lute".*
*- (John Milton, Comus)*

ಮಿಲ್ಟನ್‌ನ ಅಭಿಪ್ರಾಯವೇನೆಂದರೆ - ದಿವ್ಯವಾಗಿರುವ ತತ್ವಜ್ಞಾನವದೆಷ್ಟು ಚೇತೋಹಾರಿ ! ಅದು, ಮಂದಮತಿಗಳು ಮೂರ್ಖರು ತಿಳಿದಿರುವಂತೆ ಜಟಿಲ-ಕರ್ಕಶವಾಗಿರದೆ ಅಪೋಲನ (ಗ್ರೀಕ್ ದೇವತೆ) ವೇಣು ಸದೃಶವಾಗಿ ಕರ್ಣಾನಂದವಾಗಿರುತ್ತದೆ. ಇಂಥ ಚೇತೋಹಾರಿಯಾದ ದಿವ್ಯಜ್ಞಾನವನ್ನು ಸಂಗೀತ ಮಾಧ್ಯಮದ ಮೂಲಕ ಹೊರಹೊಮ್ಮಿಸಿದರೆ ಕರ್ಣಕ್ಕೆಮಧುರ ಹೃದಯಕ್ಕೆ ಆನಂದ. ಇಂಥ ಅಮರಗೀತೆಗಳನ್ನು ರಚಿಸಿರುವವರು ನಮ್ಮ ಪೂರ್ವಿಕರು. ಅವರಲ್ಲಿ ಅತ್ಯಂತ ಪ್ರಮುಖ ನಾದವನು ಕೊಂಡಗುಳಿ ಕೇಶಿರಾಜ - ಅನುಭಾವಿ ಸಂಗೀತದ ಸಾಮ್ರಾಟ.

ಆಧ್ಯಾತ್ಮ ಭಾರತೀಯರ ಉಸಿರು, ಸಂಗೀತ ಪ್ರಾಣವಾಯು. ಭಾರತೀಯ ಸಂಸ್ಕೃತಿಯ ಹೆಗ್ಗುರುತುಗಳಾಗಿ ಬೆಳೆದುಬಂದ ಸಂಗೀತ, ಸಾಹಿತ್ಯ, ನೃತ್ಯ, ಚಿತ್ರಕಲೆ, ಶಿಲ್ಪಕಲೆ ಮುಂತಾದ ಕಲೆಗಳು, ಆಧ್ಯಾತ್ಮದ ಸತ್ವವನ್ನು ಹೀರಿಕೊಂಡೇ ಬೆಳೆದು ಬಂದಿವೆ ಮತ್ತೆ ಅವೇ ಆಧ್ಯಾತ್ಮವನ್ನು ವ್ಯಕ್ತಪಡಿಸುವ ಮಹತ್ವದ ಪ್ರತಿ ಬಿಂಬಗಳಾಗಿವೆ. ಇವುಗಳಲ್ಲಿ ಸಂಗೀತಕ್ಕೆ ಹೆಚ್ಚಿನ ಪ್ರಧಾನ್ಯತೆಯಿದೆ, ಇಷ್ಟು ಸಂಗೀತ ಮನುಷ್ಯನ ಎದೆಯಾಳದಿಂದ ಹೊರಹೊಮ್ಮುತ್ತದೆ. ಮಾತ್ರವಲ್ಲ ಪ್ರಕೃತಿಯೇ ನಾದಪೂರ್ಣ, ನೆರೆ-ತೊರೆ, ಗಿಡ ಗೆಂಟೆ, ಗಾಳಿ-ಮಳೆ, ಪ್ರಾಣಿ-ಪಕ್ಷಿಗಳ ಉಲಿತಕಲರವದಲ್ಲೂ ನಾದದ ಅಲೆ ಪ್ರಸರಿಸುತ್ತಿದೆ. ಜಗತ್ತೆಲ್ಲ ನಾದಮಯವಾಗಿರುವುದರಿಂದ 'ನಾದ' ಬ್ರಹ್ಮನೆನಿಸಿತು. ನಾದೋಪಾಸನೆ ಶಿವನ ಸಾಕ್ಷಾತ್ಕಾರಕ್ಕೆ ಮಾಧ್ಯಮ ವಾಯತು. ಶಿವನನ್ನು ಒಲಿಸಿಕೊಳ್ಳುವ ಸಹಜಯೋಗವಾಯಿತು. ಅದರಲ್ಲೂ ಭಕ್ತಿಯಿಂದೊಡಗೂಡಿದ ಸಂಗೀತ ಜಪ ತಪಗಳಿಗಿಂತ ಶ್ರೇಷ್ಠವೆಂದು ಭಾವಿಸಲಾಗಿದೆ. ಬಸವಣ್ಣನವರ ಒಂದು ವಚನ ಈ ಭಾವನೆಗೆ ಪುಷ್ಟಿಯನ್ನೊದಗಿಸುತ್ತದೆ.

*''ಕೋಟ್ಯನುಕೋಟಿ ಜಪವಮಾಡಿ ಕೋಟಲೆಗೊಳ್ಳಲದೇಕೆ ಮನವೆ ?*
*ಕಿಂಚಿತ್ ಗೀತವೊಂದನಂತ ಕೋಟಿ ಜಪ !*
*ಜಪವೆಂಬುದೇಕೆ ಮನವೆ ?*
*ಕೂಡಲಸಂಗನ ಶರಣರಕಂಡು*
*ಆಡಿ ಹಾಡಿ ಬದುಕುಮನವೆ !''*

ಕೋಟಿ ಕೋಟಿ ಜಪಕ್ಕಿಂತ ಹೃದಯತುಂಬಿ ಹಾಡುವ ಒಂದು ಗೀತೆ ಮಿಗಿಲಾದದ್ದು ಎನ್ನುತ್ತಾರೆ ಬಸವಣ್ಣನವರು.

''ತಾಳಮೇಳಗಳಿದ್ದು ಪ್ರೇಮವಿಲ್ಲದಗಾನ ಕೇಳನೋಹರಿ ತಾಳನೋ ಎಂದಿದ್ದಾರೆ ಪುರಂದರದಾಸರು. ಆದರೆ ರಾಗ-ತಾಳ-ಮೇಳಗಳಿಲ್ಲದಿದ್ದರೂ ಭಕ್ತಿರಸ ತುಂಬಿದ ಗಾನವಾದರೆ ಸಾಕು. ತಮತಮಗೆ ತಿಳಿದ ಧಾಟಿಯಲ್ಲಿ ಹಾಡಿಕೊಳ್ಳುವುದರಲ್ಲಿ ಔಚಿತ್ಯವಿದೆ. ಬಸವಣ್ಣನವರು ನಮ್ಮ ಮನದ ಭಾವಗಳನ್ನು ಊಹಿಸಿ ಹೇಳಿರುವರೇನೋ ಎಂಬಂತೆ ತಮಗೆ ಅನ್ವಯಿಸಿಕೊಂಡು ಹೇಳುತ್ತಾರೆ. ತಾಳ, ಮಾನ, ಸರಿಸಮವಾಗಿ ಗೊತ್ತಿಲ್ಲ. ಸ್ವರ ವಿನ್ಯಾಸಗಳಾಗಲಿ, ಕ್ರಮವರಿತ ಏರಿಳಿತಗಳಾಗಲಿ ತಾವು ತಿಳಿದವರಲ್ಲ ಹಾಗೆಯೇ ಛಂದಸ್ಸಿನಲ್ಲಿ ಬರುವ ಅಮೃತಗಣ, ದೇವಗಣಗಳನ್ನು ತಿಳಿದಿಲ್ಲ ಆದರೆ 'ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ'' ಈ ಮಾತುಗಳಲ್ಲಿ ಭಕ್ತಿಸಂಗೀತದ ಸಾರಸತ್ವ ಅಡಗಿದೆ. ಸಂಗೀತದ ನಿಯಮಗಳರಿವಿಲ್ಲದ ನಮಗೆ ಬಸವಣ್ಣನವರ ನುಡಿಗಳು ಪ್ರೋತ್ಸಾಹದಾಯಕವಾಗಿವೆ. ನಮಗೆ ತಿಳಿದಂತೆ ಶಿವಗೀತೆಗಳನ್ನು ಹಾಡಿಕೊಳ್ಳಬಹುದು. ಇದರಿಂದ ನಮ್ಮ ತ್ರಿಕರಣಗಳು ಪರಮಾತ್ಮನಲ್ಲಿ ಏಕೀಕೃತವಾಗಿ, ಮನಸ್ಸಿನ ಚಿತ್ತಚಾಂಚಲ್ಯವಳಿದು ಚಿತ್ತೈಕಾಗ್ರತೆಯು ಸಾಧ್ಯವಾಗುವುದು

ಆತ್ಮ-ಪರಮಾತ್ಮರ ಸಂಗಮಕ್ಕೆ ಸಂಗೀತವು ಅತ್ಯಂತ ಸುಲಭ ಮಾರ್ಗವಾಗಿದೆ. ಬಸವಣ್ಣ, ನೀಲಾಂಬಿಕೆ, ಅಕ್ಕಮಹಾದೇವಿ, ಸಕಲೇಶಮಾದರಸ, ಕಿನ್ನರಿ ಬೊಮ್ಮಯ್ಯ ಅಲ್ಲಯ್ಯ, ಢಕ್ಕೆಯಮಾರಯ್ಯ, ರಾಗದಸಂಕಣ್ಣ, ಬಹುರೂಪಿ ಚೌಡಯ್ಯ, ಅಲ್ಲಮ ಪ್ರಭು ಮೊದಲಾದ ಶರಣ-ಶರಣೆಯರು ಸಂಗೀತದ ಮೂಲಕ ಸಂಗಯ್ಯನನ್ನು ಒಲಿಸಿಕೊಂಡರು. ಕೆಲವರಂತೂ ಸಂಗೀತಕಲೆಯ ಜೊತೆಗೆ ಸಂಗೀತಶಾಸ್ತ್ರಕ್ಕೆ ಬದ್ಧರಾಗಿ ಅನೇಕ ರಾಗಗಳ ಮೇಲೆ ಪ್ರಭುತ್ವವನ್ನು ಪಡೆದುಕೊಂಡಿದ್ದರು. ಅಂಥಮಹಾಶಿವಶರಣರಲ್ಲಿ ಸಕಲೇಶಮಾದರಸ, ಕಿನ್ನರಿ ಬೊಮ್ಮಯ್ಯ, ಬಹುರೂಪಿ ಚೌಡಯ್ಯ, ಗಜೇಶಮಸಣಯ್ಯ, ರಾಗದ ಸಂಕಣ್ಣ ಮುಂತಾದವರು ಪ್ರಸಿದ್ಧರು.

ಶಿವಶರಣರು ತಮ್ಮ ಸಂಗೀತಕ್ಕಾಗಿ ಬಳಸುತ್ತಿದ್ದ ವಾದ್ಯಗಳು ಆಯಾಯ ಶರಣರ ಹೆಸರಿನಿಂದ ಪ್ರಸಿದ್ಧವಾಗಿರುವುದು ಅಂದಿನ ವೈಶಿಷ್ಟ್ಯವೆನ್ನಬಹುದು. ೨೦ನೇ ಶತಮಾನದಲ್ಲೂ ನಾವು ಇಂತಹ ಸಂಗತಿಗಳನ್ನು ಕೇಳಿದ್ದೇವಲ್ಲವೆ ? ಉದಾಹರಣೆಗೆ ಚೌಡಯ್ಯನವರ ಪಿಟೀಲು, ದೊರೆಸ್ವಾಮಿ ಐಯ್ಯಂಗಾರರ ವೀಣೆ, ಬಿಸ್ಮಿಲ್ಲಖಾನರ ಷಹನಾಯಿ ಮುಂತಾಗಿ . ಇದೇ ರೀತಿ ಅಂದು ಬೊಮ್ಮಯ್ಯನ ಕಿನ್ನರಿ, ಕಕ್ಕಯ್ಯನ ಕಂಕರಿ, ಸಕಲೇಶಮಾದರಸನ ವೀಣೆ, ಬೊಮ್ಮಯ್ಯನ ತಾಳ, ಮಾರಯ್ಯನಢಕ್ಕೆ, ಅಲ್ಲಮ ಪ್ರಭುವಿನ ಮದ್ದಳೆ, ಬಸವಣ್ಣನ ದೆಂಡಿಗೆ ಮುಂತಾದವುಗಳನ್ನು ಗಮನಿಸಬಹುದು. ಈ ಎಲ್ಲ ವಾದ್ಯಗಳು ಜನಪದ ಸಂಗೀತವಾದ್ಯಗಳಾಗಿದ್ದಿರಬೇಕು. ಕೆಲವಾದ್ಯಗಳು ಈಗಲೂ ಗ್ರಾಮಗಳಲ್ಲಿ ಕಾಣಸಿಗುತ್ತವೆ.

ಬಸವಪೂರ್ವಕಾಲದಲ್ಲಿ ಹುಟ್ಟಿ, ಶರಣ ಪರಂಪರೆಗನು ಗುಣವಾಗಿ ಬಾಳಿ, ಕವಿಯಾಗಿ ವಿದ್ಯಾಪೋಷಕನಾಗಿ ಹೆಸರು ಮಾಡಿದವನು ಕೊಂಡಗುಳಿ ಕೇಶಿರಾಜ. ಹರಿಹರ ಕವಿಯ 'ಕೇಶಿರಾಜ ಡಣ್ಣಾಯಕರ ರಗಳೆ' ಇವನ ಜೀವನ ಚರಿತ್ರೆಯ ಬಗ್ಗೆ ಬೆಳಕು ಚೆಲ್ಲುತ್ತದೆ. ಅಲ್ಲದೆ ಕೊಂಡಗುಳಿ ಶಾಸನದಿಂದ ಇವನ ಕಾಲದ ಬಗ್ಗೆ ನಿರ್ಣಯಿಸಬಹುದು (ಕ್ರಿ.ಶ. ೧೧೦೭) ಕೇಶಿರಾಜನ ಹುಟ್ಟೂರು ಕೊಂಡಗುಳಿ. (ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲ್ಲೂಕು) ತಂದೆ ಹೊಳಲಮರಸ, ತಾಯಿ ದುರ್ಗಾದೇವಿ, ಮಡದಿ ಗಂಗಾದೇವಿ, ಈತನ ಗುರು ವಿರೂಪಾಕ್ಷ, ಇಷ್ಟದೈವ ಸೋಮನಾಥ.

ಕೇಶೀರಾಜನ ಬದುಕೊಂದು ಕಾವ್ಯ, ಸಂಗೀತ ಸೃಷ್ಟಿ ಅವನ ಜೀವನ. ಶಿವಭಕ್ತಿಯೇ ಅವನ ಶಕ್ತಿ. ಎಲ್ಲರೂ ಪುಷ್ಪಗಳಿಂದ ಶಿವನನ್ನು ಅರ್ಚಿಸಿದರೆ ಇವನ ಪೂಜೆ ಸಂಗೀತ ಪುಷ್ಪಗಳಿಂದ, ಅದೂ ನಿತ್ಯ ನಿತ್ಯ ವೈವಿಧ್ಯಪೂರ್ಣದ ಹೊಸಸೃಷ್ಟಿ. ಹರಿಹರ ಹೇಳುವಂತೆ ಆನಂದ ಹೇಳುವಂತೆ ಆನಂದ ಜಲದೊಡನೆ 'ಅಟ್ಟಹಾಸಂ ನಿಮಿರೆ ಉಬ್ಬರದ ಭಕ್ತಿ ಚಿತ್ತಮನಡರೆ' ಕೇಶಿರಾಜ ನಿತ್ಯ ಎಂಟು ಪದ್ಯಗಳನ್ನು ಬರೆಯುತ್ತ ಅವುಗಳನ್ನು ಸೋಮನಾಥನಿಗೆ ಅರ್ಪಿಸುತ್ತ ವಸ್ತುಕ, ವರ್ಣಕಗಳೆರಡರಲ್ಲೂ ಶಿವಸ್ತುತಿಗಳನ್ನು ರಚಿಸುತ್ತ ಶಂಕರ ಸ್ತೋತ್ರವೇ ತನ್ನ ವೃತ್ತಿಯಾಗಿ ಬಾಳುತ್ತಿದ್ದ. ಕಂದ, ತ್ರಿಪದಿ, ರಗಳೆ, ವಚನ, ದಂಡಕ, ಅಷ್ಟಕ ಮೊದಲಾದ ಎಲ್ಲ ಛಂದೋರೂಪಗಳಲ್ಲಿಯೂ ಬಂಧುರವಾದ ಕೃತಿಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. 'ಷಡಕ್ಷರ ಮಂತ್ರಮಹಿಮೆ' (ನೂರಹತ್ತು ಕಂದ ಪದ್ಯಗಳ ಒಂದು ಕೃತಿ) ಮತ್ತು ನೂತನವಾಗಿ ಶೋಧಿಸಲ್ಪಟ್ಟ 'ಲಿಂಗಸ್ತೋತ್ರದ ಮಹಿಮೆ' ಮಾತ್ರ ನಮಗೆ ದೊರಕಿವೆ.

ಕೇಶಿರಾಜನ ಜೀವನ ಗುರುಭಕ್ತಿ, ಶಿವನಿಷ್ಠೆ, ಸಂಗೀತ ಸೃಷ್ಟಿಯ ಪ್ರತೀಕವಾಗಿ ಸಾಗುತ್ತಿದ್ದಾಗ ಅವನ ಜೀವನಕ್ಕೆ ಒಂದು ತಿರುವುಬರುತ್ತದೆ. ಉತ್ತಮನೂ, ನೀತಿವಂತನೂ, ವಿವೇಕಿಯೂ ಆಗಿರುವ ವ್ಯಕ್ತಿಗಾಗಿ ಹುಡುಕುತ್ತಿದ್ದ ಕಲ್ಯಾಣರಾಜ್ಯದ ಪೆರ್ಮಾಡಿಗೆ ಕೇಶಿರಾಜನಲ್ಲಿ ತಾನು ಬಯಸುತ್ತಿದ್ದ ಗುಣಗಳೆಲ್ಲ ಕಂಡು ಬಂದು ಅವನನ್ನು ಕರೆಸಿ ಪ್ರಧಾನಮಂತ್ರಿಯ ಪಟ್ಟವನ್ನು ಒಲಿಸಿ ಒಪ್ಪಿಸುತ್ತಾನೆ. ಕೇಶಿರಾಜನ ಕುಶಲ ರಾಜ್ಯ ನಿರ್ವಹಣೆಯಿಂದ ಅವನ ರಾಜ್ಯ ಸುಖೀರಾಜ್ಯವಾಗಿ ಶೋಭಿಸುತ್ತದೆ. ಅವನ ಕೀರ್ತಿಯ ಕಳಶ ಹೊಳೆಯುತ್ತದೆ -

*''ಮಂತ್ರಕ್ಕೆ ನೆರೆ ಕೇಶಿರಾಜ ದಣ್ಣಾಯಕರ್*
*ತಂತ್ರಕ್ಕೆ ಮಿಗೆ ಕೇಶಿರಾಜ ದಣ್ಣಾಯಕರ್*
*ಮಾತಿಗೆಲ್ಲಂ ಕೇಶಿರಾಜ ದಣ್ಣಾಯಕರ್*
*ನೀತಿಗೆಲ್ಲಂ ಕೇಶಿರಾಜ ದಣ್ಣಾಯಕರ್ !''*

ಕೇಶಿರಾಜ ಇಂತಹ ಹೊಗಳಿಕೆಗಳಿಗೆ ಮನಸೋತವನಲ್ಲ. ಅವನು ಕವಿ, ಸಂಗೀತಪ್ರೇಮಿ, ಒಮ್ಮೆ ಶರಣರಮಧ್ಯೆ ಸಂಗೀತಗೋಷ್ಠಿಯಲ್ಲಿ ಪರಮಾನಂದ ಭರಿತನಾಗಿದ್ದಾಗ ರಾಜನಿಂದ ಆಸ್ಥಾನಕ್ಕೆ ಬರುವಂತೆ ಕರೆಬರುತ್ತದೆ. 'ಸಿರಿಯ ಸಂಗಂ ಶರಣಸಂಗಕ್ಕೆ ಪಗೆಯಾಯ್ತು'' ಎಂದು ಉಮ್ಮಳಿಸಿ ಶರಣಗೋಷ್ಠಿಯನ್ನು ತೊರೆದು ಹೋಗಲಾರದೆ ತಡವಾಗಿ ಅರಸನ ಒಲಗಕ್ಕೆ ಹೋಗುತ್ತಾನೆ. ಆ ವೇಳೆಗಾಗಲೇ ಚಾಡಿಯ ಮಾತುಗಳಿಗೆ ಒಳಗಾಳಗಾಗಿದ್ದ ಅರಗ ಕನಲಿ ಕೇಳುತ್ತಾನೆ ಬರಲು





ಇಷ್ಟು ತಡವೇಕೆ ದಣ್ಣಾಯಕೆ ? ಕೇಶಿರಾಜ ಉತ್ತರಿಸಿದ - 'ಶರಣರ ಸಂಗದಲ್ಲಿದ್ದೆ ಪ್ರಭು, ಅವರಿಗೆ ತಿಳಿಸಿ ಬರುವುದರೊಳಗಾಗಿ ತಡವಾಯಿತು'. ರಾಜ ನಿಷ್ಠುರನಾಗಿ ನುಡಿದ ''ನನ್ನ ಕಾರ್ಯ ಅಥವಾ ಶರಣ ಕಾರ್ಯ ಇವುಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳ ದಣ್ಣಾಯಕೆ !'' ತಟ್ಟನೆ ಕೇಶಿರಾಜ'' ಒಲ್ಲೆನೊಲ್ಲೆನ್ ತೆಗೆ, ಇದೇಕೆ ? ಬೇಡ'' ಎಂದು ಸೇವಿಕಾವೃತ್ತಿಯಂ ಮನದ ಕಾಲಿಂದೊದೆದು '' ಹೊರಡು ಬಿಡುತ್ತಾನೆ. ಇದಲ್ಲವೇ ಆತ್ಮಗೌರವ ! ನೈತಿಕ ತೇಜಸ್ಸು! ಗಂಡನ ಪದವಿನ್ಯಾಸದ ಬಗ್ಗೆ ತಿಳಿದ ಗಂಗಾದೇವಿ ಪತಿಯ ನೆರಳಾಗಿ ಅವನನ್ನು ಹಿಂಬಾಲಿಸುತ್ತಾಳೆ.

ಕಲ್ಯಾಣರಾಜ್ಯವನ್ನು ತೊರೆದನಂತರ ಕೆಲಕಾಲ ಶಿವಪುರದಲ್ಲಿದ್ದು ತನ್ನ ಹುಟ್ಟೂರಿಗೆ ಮರಳುತ್ತಿರುವಾಗ ನಡೆದ ಒಂದು ಘಟನೆ. ಅವನ ಲಿಂಗಭಕ್ತಿ-ನಿಷ್ಠೆಗಳನ್ನು ಹಾಗೂ ಅವನ ಸಂಗೀತದ ಪವಾಡಸದೃಶ ಶಕ್ತಿಯನ್ನೂ ತೋರಿಸುತ್ತದೆ. ಕೇಶಿರಾಜನ ಪಯಣ ಸಾಗುತ್ತಿದ್ದಾಗ ಮಾರ್ಗದಲ್ಲಿ ನದಿಯೊಂದು ಅಡ್ಡಲಾಗುತ್ತದೆ. ಲಿಂಗಾರ್ಚನೆಗೆ ವೇಳೆಯಾದ್ದರಿಂದ ನದಿಯದಡದ ಮೇಲೆ ಕುಳಿತು ಅಂಗೈಯಲ್ಲಿ ಲಿಂಗವನ್ನು ಹಿಡಿದು ಕೆಂಪು ದಾಸವಾಳದ ಹೂವನ್ನು ಧರಿಸಿ ಹಾಡುತ್ತಾ ಪೂಜಿಸುತ್ತಿರುವಾಗ, ಗರುಡ ಪಕ್ಷಿಯೊಂದು ಕೆಂಪು ಹೂವನ್ನು ತನ್ನ ಆಹಾರವೆಂದು ಭ್ರಮಿಸಿ ಹಾರಿಸಿಕೊಂಡು ಹೋಗುವಾಗ ಲಿಂಗವೂ ಅದರೊಂದಿಗೆ ಸೇರಿದ್ದು ನದಿಯ ಮಧ್ಯೆ ಬಿದ್ದು ಹೋಗುತ್ತದೆ. ಲಿಂಗವನ್ನು ಕಳೆದುಕೊಂಡ ಕೇಶಿರಾಜ ಪ್ರಾಣತ್ಯಾಗಕ್ಕೆ ಸಿದ್ಧನಾಗುತ್ತಾನೆ. ಈ ಘಟನೆ ಕೇಶೀರಾಜನ ಲಿಂಗಶ್ರದ್ಧೆಯ, ಭಕ್ತಿಯ ಪರಾಕಾಷ್ಟತೆಗಳ ಪರೀಕ್ಷೆಯೇನೋ ! ಲಿಂಗವನ್ನು ಹುಡುಕಬೇಕೆಂಬ ಪ್ರೇರಣೆಯಿಂದ ಅವನು ಒಂದು ಹರಿಗೋಲಿನಲ್ಲಿ ನದಿಯ ಮಧ್ಯಕ್ಕೆ ಹೋಗುವ ಹರಿಹರನ ವಿವರಣೆ ನಮ್ಮ ಕಣ್ಣುಗಳಿಗೆ ದೃಷ್ಯವಾಗಿ ಕಾಣಿಸುತ್ತದೆ. ಕೇಶೀರಾಜ ಲಿಂಗವನ್ನು ಕೂಗಿ ಕೂಗಿ ಕರೆಯುತ್ತಾನೆ. ಹಾಡಿ ಹಾಡಿ ಕರೆಯುತ್ತಾನೆ. ಇಂಥ ಒಂದು ಘಟನೆ ನುಲಿಯ ಚಂದಯ್ಯನ ಜೀವನದಲ್ಲಿ ನಾವು ಕಾಣುತ್ತೇವೆ. ಆದರೆ ಇದಕ್ಕೆ ವಿರುದ್ಧ ಚಂದಯ್ಯನ ಲಿಂಗ ನೀರಿಗೆ ಜಾರಿಬಿದ್ದಾಗ ತನ್ನ ಜಂಗಮ ದಾಸೋಹಕ್ಕೆ ತಡವಾಗುವುದೆಂದು ಹುಡುಕಹೋಗದೆ ಹುಲ್ಲಿನ ಹೊರೆ ಹೊತ್ತು ನಡೆಯುತ್ತಾನೆ. ಆದರೆ ಲಿಂಗವೇ ಅವನ ಹಿಂದೆ ಬಂದು ತನ್ನನ್ನು ಸ್ವೀಕರಿಸುವಂತೆ ಕೇಳಿಕೊಳ್ಳುತ್ತದೆ. ಆದರೆ ಚಂದಯ್ಯ ಕೇಳಿಕೆಯನ್ನು ನಿರಾಕರಿಸುತ್ತಾನೆ. 'ನೀನಾಗೀ ನೀನು ನನ್ನನ್ನು ತೊರೆದೆ, ಅಲ್ಲದೆ ಜಂಗಮ ಸೇವೆಯೇ ಲಿಂಗಸೇವೆ ಎಂದು ಭಾವಿಸಿರುವ ನನಗೆ ನಿನ್ನ ಅವಶ್ಯಕತೆಯಿಲ್ಲ' ಎನ್ನುತ್ತಾನೆ. ಆದರೆ ಮುಂದೆ ಅನುಭವ ಮಂಟಪದಲ್ಲಿ ಚರ್ಚೆ ನಡೆದು ಚಂದಯ್ಯ ಲಿಂಗವನ್ನು ಸ್ವೀಕರಿಸುತ್ತಾನೆ. ಆದರೆ ಇಲ್ಲಿ ಕೇಶೀರಾಜ ಲಿಂಗವನ್ನು ಬಿಟ್ಟು ಒಂದರಗಳಿಗೆಯೂ ಇರಲಾರ ಲಿಂಗಕ್ಕಾಗಿ ಪ್ರಲಾಪಿಸುತ್ತಾನೆ. ವಿಲಾಪಿಸುತ್ತಾನೆ. 'ಗಂಧ ಅಕ್ಷತೆಗಳನ್ನು ಬಿಟ್ಟು ಹೋಗಬಹುದೇ ನನ್ನಮೇಲೆ ಮುನಿಸಿಕೊಂಡು ಹೋಗಬಹುದೇ ?' ಎಂದು ವಿಲಾಪಿಸುತ್ತಾ ನದಿಯ ಮಧ್ಯೆ ನಿಂತು-

*''.....ಸೋಮನಾಥ ಬಾರೈ ಬಾರಾ*
*ಮೃಡ ಭರ್ಗ ಭೀಮ ಭಾಳಾಕ್ಷ ಬಾರೈ ತಂದೆ*
*ಎನ್ನ ತವನಿಧಿಯೇ ಬಳಲಿಸದೆ ಬಾರೈ ತಂದೆ*
*ಎನ್ನ ಸುಖನಿಧಿಯೆ ಕಾಡದೆಕರುಣಿಸೆಲೆ ತಂದೆ*
*ಚಂದ್ರಧರ ಮದನಹರ ನಿನ್ನ ಮೊಗವಂ ತೋರ*
*ಇಂದ್ರಾದಿಸುರನಿಕರವಂದ್ಯ ಪದಮಂ ತೋರ -''*

ಮುಂತಾಗಿ ಹೃದಯ ಕರಗಿ ಹಾಡಾಗಿ ಹರಿಯುತ್ತಿಹುದೋ ಎಂಬಂತೆ ಹಾಡುತ್ತಿರುತ್ತಾನೆ. ಭಕ್ತಿಯ ಶಕ್ತಿ ಬಹು ದೊಡ್ಡದು. ದೀಪಕರಾಗ ಹಾಡಿದಾಗ ದೀಪಗಳು ತಂತಾನೆ ಬೆಳಗುತ್ತವಂತೆ ''ಭಕ್ತಿರಸದಿಂ ಮುಕ್ತಿಪಡವೊಗೆದು ಬರ್ಪಂತೆ'' ಕೇಶೀರಾಜನ ಲಿಂಗ ನದಿಯಿಂದ ಮೇಲೆದ್ದು ಬಂದು ಕೇಶಿರಾಜನ ಕೈಸೇರುತ್ತದೆ. 'ಭಕ್ತ ಆನಂದದಿಂದ ಕುಣಿದಾಡಿದ ನಲಿದಾಡಿದ' ಹೀಗೆ ಪವಾಡ ಸದೃಶವಾಗಿ ಲಿಂಗವನ್ನು ಪಡೆದ ಕೇಶೀರಾಜ ಕೊಂಡಗುಳಿಗೆ ಹಿಂತಿರುಗಿ ತುಂಬು ಜೀವನವನ್ನು ನಡೆಸಿ ಶಿವಕ್ಯನಾಗುತ್ತಾನೆ. ಕೇಶೀರಾಜ ನಿತ್ಯನಿತ್ಯ ತನ್ನ ಆತ್ಮನೈವೇದ್ಯವನ್ನು ಪದ್ಯ (ಸಂಗೀತ) ರೂಪದಲ್ಲಿ ಪರಮಾತ್ಮನಿಗೆ ಅರ್ಪಿಸಿದ ಅರ್ಪಣೆ ನಮ್ಮ ಆದರ್ಶವಾಗಬೇಕು. ಅವನು ಹೇಳಿದ ಶಿವಮಂತ್ರ ನಮ್ಮ ನಾಲಿಗೆಯ ಮೇಲೆ ನಲಿದಾಡಬೇಕು ಆಗ ನಮ್ಮ ಭಕ್ತಿ ಅವನಿಗೆ ಸಲ್ಲುತ್ತದೆ.

*''ಕೋಟಿ ಜಪಂ ಕೋಟಿತಪಂ*
*ಕೋಟಿ ಮಹಾದಾನಧರ್ಮ ಪರಹಿತಚರಿತಂ*
*ಕೋಟ್ಯಾಂತರ ಪಾಪಂಗಳ*
*ದಾಟಿಪ ಜಪಮೋಂ ನುಮಶ್ಶಿವಾಯ ಪದಂ''*

*(ಕೇಶಿರಾಜನ ಷಡಕ್ಷರ ಮಂತ್ರ ಮಹಿಮೆ)*

★



# ಒಂದೇ ನಾಣ್ಯದ ಎರಡು ಮುಖಗಳು

## ನಾಣ್ಯದ ಮೊದಲ ಮುಖ

– ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ',
ನಂ. ೨/೨೦೫೯. ೧೧ನೇ ಕ್ರಾಸ್,
ಎಸ್.ಎಸ್. ಪುರಂ, ತುಮಕೂರು – ೫೭೨ ೧೦೨.
ದೂರವಾಣಿ : (೦೮೧೬) ೨೨೭೮೪೯

ರೋಗನಿಧಾನ, ರೋಗವನ್ನು ವಾಸಿಮಾಡುವ ವಿಧಾನ ಇವುಗಳೆಲ್ಲಾ ಎಷ್ಟೇ ಮುಂದುವರಿದಿದ್ದರೂ ರೋಗ ಬರದಂತೆ ನಡೆಯುವುದೇ ಉತ್ತಮವೆಂದು ತಿಳಿದಾಯ್ತು. ನಾವು ಎಷ್ಟೇ ಮುನ್ನೆಚ್ಚರಿಕೆ ವಹಿಸಿದರೂ ರೋಗ ಬರುವ ಸಾಧ್ಯತೆಯಿದೆ. ಆಗ ಏನು ಮಾಡಬೇಕು? ಮೊದಲು ರೋಗವೆಂದರೇನೆಂಬುದನ್ನು ಅರ್ಥಮಾಡಿಕೊಳ್ಳಬೇಕು. 'ಏಕೋ ತಲೆನೋವು ಬಂತು!', 'ಏಕೋ ಜ್ವರ ಬಂತು!' – ಸಾಮಾನ್ಯವಾಗಿ ಇಂತಹ ಹೇಳಿಕೆಗಳನ್ನು ಕೇಳಿದ್ದೀರಿ. ನಿಸರ್ಗನಿಯಮದಲ್ಲಿ 'ಏಕೋ, ಏನೋ' ಮುಂತಾದ ಅನಿಶ್ಚಿತತೆ ಇಲ್ಲ. ಅದಕ್ಕೆ ನಿಶ್ಚಿತ ಕಾರಣವಿರಬೇಕು. ಅದು ನಮಗೆ ಅರ್ಥವಾಗಿಲ್ಲವೆನ್ನುವುದು ಸತ್ಯಕ್ಕೆ ಹತ್ತಿರ. ಅದನ್ನು ಅರ್ಥಮಾಡಿಕೊಳ್ಳಬೇಕಾದುದು ಅತ್ಯಂತ ಅವಶ್ಯ. ಅದರ ಬಗ್ಗೆ ತಿಳಿದುಕೊಳ್ಳುವುದು ಹೇಗೆ? ಯಾವುದಾದರೊಂದು ಗೊತ್ತಿಲ್ಲದ ವಿಷಯವನ್ನು ತಿಳಿಯಬೇಕಾದರೆ ಗೊತ್ತಿರುವ ವಿಷಯದ ಮುಖಾಂತರವೇ ಹೋಗಬೇಕು. ನಮಗೆ ಗೊತ್ತಿರುವ ವಿಷಯ ಯಾವುದು? – ರೋಗವಿಲ್ಲದ ಸ್ಥಿತಿ. ಇದನ್ನು ನಾವು ಆರೋಗ್ಯವೆಂದು ಕರೆಯುತ್ತೇವೆ. ಹಾಗಾದರೆ ಆರೋಗ್ಯದ ಬಗ್ಗೆ ತಿಳಿದುಕೊಂಡರೆ ರೋಗ ಅರ್ಥವಾಗುತ್ತದೆ. ''ಹೌದು. ಹಾಗಾದರೆ ಆರೋಗ್ಯವೆಂದರೇನು?'' ಅದೇ ರೋಗವಿಲ್ಲದ್ದು. 'ನೇತಿ, 'ನೇತಿ' ಎಂದು ದೇವರ ವರ್ಣನೆ ಮಾಡಿದ ಹಾಗಾಯ್ತು! ನಿಜವಾಗಿಯೂ ನಮಗೆ ಆರೋಗ್ಯ ಬೇಕೆ? ಏಕೆ ಹಾಗೆ ಕೇಳುತ್ತೀರಿ? ಯಾರಿಗೆ ಆರೋಗ್ಯಬೇಡ? ಈಗ ಬೆಳಿಗ್ಗೆ ಇಬ್ಬರು ಸಿಕ್ಕಿದರೆ ಸಂಭಾಷಣೆ ಪ್ರಾರಂಭ,

'ಕಾಫಿ ಆಯ್ತೇ?'

ಹಿಂದೆ ಇಬ್ಬರು ಸಿಕ್ಕಿದರೆ ಪರಸ್ಪರ ಸಂಭಾಷಣೆ ಪ್ರಾರಂಭವಾಗುತ್ತಿದ್ದುದು ಹೀಗೆ, 'ಆರೋಗ್ಯವೇ?' – 'ನಾನು ಆರೋಗ್ಯ, ತಾವು ಆರೋಗ್ಯವೇ?' ಆಗ ಪತ್ರ ಪ್ರಾರಂಭವಾಗುತ್ತಿದ್ದುದು ಹೀಗೆ, 'ಇಲ್ಲಿ ನಾನು ಕ್ಷೇಮ, ಅಲ್ಲಿ ತಾವು ಕ್ಷೇಮವೇ?' ಅವರು ಏನು ಬಯಸುತ್ತಿದ್ದರು? – ಆರೋಗ್ಯವನ್ನು. ನಾವು ಏನು ಬಯಸುತ್ತಿದ್ದೇವೆ? – ಕಾಫಿಯನ್ನು, ಯಾರು ಏನನ್ನು ಬಯಸುತ್ತಾರೊ ಅದೇ ಅವರಿಗೆ ದೊರೆಯುತ್ತದೆ. ಹಿಂದೆ ಮಕ್ಕಳಿಗೆ 'ಆರೋಗ್ಯಶಾಸ್ತ್ರ' ಎಂಬ ಒಂದು ಪಠ್ಯ ಪುಸ್ತಕವನ್ನು ಇಡುತ್ತಿದ್ದರು. ಈಗ ಅದನ್ನು ತೆಗೆದುಹಾಕಿಬಿಟ್ಟಿದ್ದಾರೆ. ಅಂದರೆ, ಇಂದು ಎಲ್ಲರೂ ಆರೋಗ್ಯವಾಗಿದ್ದೇವೆಂದು ಅರ್ಥವೇ? ಈಗಿನವರಿಗೆ ಆರೋಗ್ಯದ ಅವಶ್ಯಕತೆಯಿಲ್ಲವೇ? ಅದು ಏನೇ ಇರಲಿ, ವಿಶ್ವ ಆರೋಗ್ಯ ಸಂಸ್ಥೆ ಇನ್ನೂ ಅಸ್ತಿತ್ವದಲ್ಲಿರುವುದರಿಂದ 'ಆರೋಗ್ಯ' ಎಂದರೇನೆಂಬ ವ್ಯಾಖ್ಯೆ ಅವಶ್ಯಕವೆಂದರ್ಥ.

ಆಧುನಿಕ ವೈದ್ಯವಿಜ್ಞಾನದ ಪ್ರಕಾರ, ನಿಗದಿತ ಎತ್ತರಕ್ಕೆ ನಿಗದಿತ ತೂಕವಿದ್ದಲ್ಲಿ, ಮೂತ್ರದಲ್ಲಿ ಸಕ್ಕರೆ ಹೋಗದಿದ್ದಲ್ಲಿ, ಹೊಟ್ಟೆಯಲ್ಲಿ ಗ್ಯಾಸ್ ಹೆಚ್ಚದಿದ್ದಲ್ಲಿ, ರಕ್ತದೊತ್ತಡವಿರದಿದ್ದಲ್ಲಿ, ಒಟ್ಟಿನಲ್ಲಿ ಶರೀರದ ಒಳ ಹಾಗೂ ಹೊರ ಅಂಗಗಳ ತೊಂದರೆಕೊಡದಿದ್ದಲ್ಲಿ ಆರೋಗ್ಯವಂತನೆಂಬ ವ್ಯಾಖ್ಯೆ ಮೊದಲು ಮನ್ನಣೆ ಪಡೆದಿತ್ತು. 'The Balanced Functions of all the Organs of the body is Health.' ''ಶರೀರದ ಎಲ್ಲ ಅಂಗಗಳೂ ಸಮತೋಲನವಾಗಿ ಕೆಲಸಮಾಡಿದರೆ ಅದೇ ಆರೋಗ್ಯ'' ಹೀಗೆ ತಿಳಿದುದ್ದರಿಂದಲೇ 'The Sound mind in a sound body' – ''ಆರೋಗ್ಯವಂತ ಶರೀರದಲ್ಲಿ ಆರೋಗ್ಯದಿಂದ ಕೂಡಿದ ಮನಸ್ಸಿರುತ್ತದೆ'' ಎಂಬ ಮಾತು ರೂಢಿಗೆ ಬರಲು ಕಾರಣವಾಗಿತ್ತು. ಅಂದರೆ ಶರೀರದ ಆರೋಗ್ಯವೇ ಪ್ರಥಮವೆಂಬ ನಂಬಿಕೆ ಇತ್ತು. ಈಗಲೂ ಎಷ್ಟೋ ಜನ ವಯಸ್ಸಾದವರು ಶಾರೀರಿಕವಾಗಿ ಆರೋಗ್ಯವಾಗಿರುತ್ತಾರೆ. ಆದರೆ ಸದಾ ಸಿಡಿಮಿಡಿಗುಟ್ಟುವ, 'ವಯಸ್ಸಾದವರಿಗೆ ಕೋಪ ಹೆಚ್ಚು' ಎಂಬ ರೂಢಿಮಾತಿಗೆ ಕಾರಣವಾದ ಅವರು ನಿಜವಾಗಿಯೂ ಆರೋಗ್ಯವಂತರೇ? ಅವರೇ ಹೇಳಿಕೊಳ್ಳುತ್ತಾರೆ, 'ಕೋಪ ಬಂದರೆ ನಾನು ಮನುಷ್ಯನಲ್ಲ' ಒಮ್ಮೊಮ್ಮೆ ಮನುಷ್ಯನಿಗೆ ಅರಿವಿಲ್ಲದೆಯೇ ಅವನ ಬಾಯಿಂದ ಸತ್ಯವು ಹೊರಬಿದ್ದುಬಿಡುತ್ತದೆ! ಹುಚ್ಚರೂ ಸಹ ದೈಹಿಕವಾಗಿ ಆರೋಗ್ಯವಂತರೇ ಆಗಿರುತ್ತಾರೆ. ಅವರು ಪೂರ್ಣ ಆರೋಗ್ಯವಂತರೆಂದು ಹೇಳಲು ಸಾಧ್ಯವೇ? ಈಚೆಗೆ ವಿಶ್ವ





ಆರೋಗ್ಯ ಸಂಸ್ಥೆಯು ಆರೋಗ್ಯದ ಬಗ್ಗೆ ತನ್ನ ವ್ಯಾಖ್ಯೆಯನ್ನು ಈ ರೀತಿ ಪರಿಪೂರ್ಣಗೊಳಿಸಿಕೊಂಡಿದೆ.

''ಆರೋಗ್ಯವು ಪೂರ್ಣ ದೈಹಿಕ, ಮಾನಸಿಕ, ಸಾಮಾಜಿಕ ಸ್ವಾಸ್ಥ್ಯವೇ ವಿನಃ ಕೇವಲ ರೋಗವಿಲ್ಲದಿರುವಿಕೆಯಲ್ಲ.''

### *ದೈಹಿಕ ಆರೋಗ್ಯ*

ದೇಹದಲ್ಲಿ ಯಾವುದೇ ರೀತಿಯ ತೊಂದರೆಯಿರಲ್ಲದಿರುವಿಕೆ, ಇದು ಎಲ್ಲರಿಗೂ ಅರ್ಥವಾಗುತ್ತದೆ. ಹೆಚ್ಚು ಹೇಳುವ ಅವಶ್ಯಕತೆಯಿಲ್ಲ.

### *ಮಾನಸಿಕ ಆರೋಗ್ಯ*

ಮನುಷ್ಯ ಮುಂದುವರೆದಷ್ಟೂ ಈ ಮಾನಸಿಕ ಆರೋಗ್ಯದಲ್ಲಿಯೇ ತೊಂದರೆಯಾಗುತ್ತಿದೆ. ಮುಂದುವರಿದ ದೇಶಗಳಲ್ಲಿ ಮಾನಸಿಕ ರೋಗಿಗಳ ಹೆಚ್ಚಳವೇ ಇದಕ್ಕೆ ನಿದರ್ಶನ. ಹಳೆಯ ಗಾದೆಯನ್ನು ಈ ರೀತಿ ಮಾರ್ಪಡಿಸಿಕೊಳ್ಳುವ ಆವಶ್ಯಕತೆ ಇದೆ ಎನ್ನಿಸುವುದಿಲ್ಲವೇ? 'A Sound body if mind is sound'. ಕಾರಣ, ಶರೀರ ಮತ್ತು ಮನಸ್ಸಿನಲ್ಲಿ ಮನಸ್ಸು ಹೆಚ್ಚು ಶಕ್ತಿಯುತವಾದುದು. ಅದು ಶರೀರವನ್ನು ನಿಯಂತ್ರಿಸುತ್ತದೆ. ಶರೀರದ ಅನಾರೋಗ್ಯವು ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆನ್ನುವುದೂ ಸರಿ. ಆದರೆ, ಮನಸ್ಸಿನ ಅನಾರೋಗ್ಯ ಶರೀರವನ್ನು ಬೇಗ ರೋಗಕ್ಕೆ ದೂಡುತ್ತದೆನ್ನುವುದು ಇನ್ನೂ ಹೆಚ್ಚು ಸತ್ಯ. ಆದ್ದರಿಂದಲೇ ನಮ್ಮ ಹಿಂದಿನವರು, ''ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ'' – ಎಂದಿದ್ದಾರೆ. ಮನದಿಂದ ತಾನೆ ಮನುಷ್ಯನೆಂಬ ಹೆಸರು ಬಂದಿರುವುದು? ಮನುಷ್ಯನು ಪ್ರಾಣಿಯಿಂದ ಬೇರ್ಪಡಲು ಮನಸ್ಸು ಕಾರಣವಲ್ಲವೇ? ಈ ಕಾರಣಗಳಿಂದ ಮಾನಸಿಕ ಆರೋಗ್ಯ ದೈಹಿಕ ಆರೋಗ್ಯಕ್ಕಿಂತ ಮೊದಲ ಸ್ಥಾನ ಗಳಿಸುತ್ತದೆ.

### *ಸಾಮಾಜಿಕ ಆರೋಗ್ಯ*

ಇದರ ಅವಶ್ಯಕತೆ ಏನು? ಸಮಾಜ ಆರೋಗ್ಯವಾಗಿಲ್ಲದಿದ್ದರೆ ವ್ಯಕ್ತಿ ಆರೋಗ್ಯವಾಗಿರುವುದು ಕಷ್ಟ. ಇದಕ್ಕೆ ಇಂದಿನ ನಮ್ಮ ಸಮಾಜವೇ ಉತ್ತಮ ಉದಾಹರಣೆ. 'ನಾನು' ಎನ್ನುವ ಪದಕ್ಕಿಂತ 'ನಾವು' ಎನ್ನುವ ಪದ ಹೆಚ್ಚು ಬಳಕೆಗೆ ಬಂದರೆ ಸಾಮಾಜಿಕ ಆರೋಗ್ಯ ತನಗೆ ತಾನೇ ಹೆಚ್ಚುತ್ತದೆ. ಸಾಮಾಜಿಕ ಆರೋಗ್ಯವಿರದಿದ್ದಲ್ಲಿ ಬರೀ ಒಬ್ಬ ವ್ಯಕ್ತಿ ಎಷ್ಟೇ ದೊಡ್ಡವನಾದರೂ ಆರೋಗ್ಯವಂತನಾಗಿರಲು ಸಾಧ್ಯವಿಲ್ಲ. ಭೀಷ್ಮ, ದ್ರೋಣ ಮುಂತಾದ ಹಿರಿಯರು ದುರ್ಯೋಧನನ ಆಸ್ಥಾನದಲ್ಲಿದ್ದರು. ಅವರವರ ಸ್ವಂತ ಮಟ್ಟದಲ್ಲಿ ಎಷ್ಟೇ ದೊಡ್ಡವರಾಗಿದ್ದರೂ ಸಹ ಆ ಗುಂಪಿನಲ್ಲಿ ಇವರೇನು ಮಾಡಲಾಯ್ತು. ಒಬ್ಬ ಅಸಹಾಯಕ ಮಹಿಳೆಯನ್ನು ಬತ್ತಲೆ ಮಾಡುವ ಪ್ರಯತ್ನವನ್ನು ತಡೆಯಲಾಯ್ತೇ? ಬತ್ತಲಾದವಳು ಅವಳಲ್ಲ – ಇವರು! 'ಉಪ್ಪಿನ ಋಣ, ಮಾಡಲೇನೂ ಸಾಧ್ಯವಿಲ್ಲ' ಎಂಬಂತಹ ಅಸಹಾಯಕ ಮಾತನ್ನು ಭೀಷ್ಮರಂತಹ ವಯೋವೃದ್ಧರ, ಜ್ಞಾನವೃದ್ಧರ ಬಾಯಿಂದ ಹೇಳಿಸಿತು. ಸಾಮಾಜಿಕ ಆರೋಗ್ಯ ಕೆಟ್ಟರೆ, ಎಲ್ಲಾ ಕಡೆಯಲ್ಲಿಯೂ ಎಲ್ಲಾ ರೀತಿಯ ಅತ್ಯಾಚಾರ, ವಂಚನೆ, ಲಂಚ ಇತ್ಯಾದಿಗಳು, ಪ್ರತ್ಯಕ್ಷವಾದ, ಪರೋಕ್ಷವಾದ ಅನ್ಯಾಯಗಳು ತುಂಬಿ ತುಳುಕುತ್ತವೆ. ಸಾಮಾಜಿಕ ಶಾಂತಿ ಇಲ್ಲದಿದ್ದರೆ ಅನೇಕ ರೋಗಗಳಿಂದ ಸಮಾಜ ನರಳುತ್ತದೆ. ವ್ಯಕ್ತಿ, ಸಮಾಜದ ಅಂಗವೇ ತಾನೇ? ಸಮಾಜದಿಂದ ವ್ಯಕ್ತಿಯೋ, ಅಥವಾ ವ್ಯಕ್ತಿಯಿಂದ ಸಮಾಜವೋ? ಇದು ಬೀಜ-ವೃಕ್ಷ ನ್ಯಾಯದಂತೆ, ಸಮಾಜವನ್ನು ಒಮ್ಮೆಗೇ ತಿದ್ದುವುದು ಕಷ್ಟ. ಆದರೆ, ಒಬ್ಬ ವ್ಯಕ್ತಿ ಉತ್ತಮನಾಗಿರಲು ಪ್ರಯತ್ನಿಸಬಹುದಲ್ಲ? ಕೆಟ್ಟ ಸಮಾಜದಲ್ಲಿ ಇದು ಬಹಳ ಕಠಿಣವೆನ್ನುವುದು ನಿಜ. ಆದರೂ ಪ್ರಾರಂಭಿಸಬಹುದಲ್ಲ? ಒಬ್ಬ ಇಂಗ್ಲೀಷ್ ಬರಹಗಾರ ಹೇಳುವಂತೆ ''ನಾನೊಬ್ಬ ಉತ್ತಮನಾದರೆ ಸಮಾಜದಲ್ಲಿ ಒಬ್ಬ ಆಯೋಗ್ಯ ಕಡಿಮೆಯಾದಂತಾಯಿತಲ್ಲ''?

### *ಆಯುರ್ವೇದ – ಆರೋಗ್ಯ*

ವಿಶ್ವ ಆರೋಗ್ಯ ಸಂಸ್ಥೆ ದೈಹಿಕದಿಂದ ಹಿಡಿದು ಸಾಮಾಜಿಕ ಆರೋಗ್ಯದವರೆಗೆ ಚಿಂತಿಸಲು ಈಚೆಗಷ್ಟೇ ಪ್ರಯತ್ನಪಟ್ಟಿದೆ. ಆದರೆ ಆಯುರ್ವೇದ ಸಾವಿರಾರು ವರ್ಷಗಳ ಹಿಂದೆ ಹೇಗೆ ಚಿಂತಿಸಿದೆ ಅನ್ನುವುದನ್ನು ಕೊಂಚ ನೋಡೋಣ.

*ಸಮದೋಷಃ ಸಮಾಗ್ನಿಶ್ಚ ಸಮಧಾತು ಮಲಕ್ರಿಯಃ ।*
*ಪ್ರಸನ್ನಾತ್ಮೇಂದ್ರಿಯ ಮನಾಃ ಸ್ವಸ್ಥ ಇತ್ಯಭಿಧೀಯತೇ ॥*

– ಚರಕ ಸಂಹಿತೆ

ಸಮದೋಷಃ – ತ್ರಿದೋಷಗಳು ಸಮನಾಗಿರಬೇಕು (ವಾತ-ಪಿತ್ತ-ಕಫಗಳು), ಸಮಾಗ್ನಿಶ್ಚ ಅಗ್ನಿಗಳು ಸಮಾವಾಗಿರಬೇಕು. (ಚಿಂತನಾಗ್ನಿಯೇ ನಂದಿರುವಾಗ ಜಠರಾಗ್ನಿ ಮೊದಲಾದವು ಮಂದವಾಗಿರುವುದರಲ್ಲಿ ಅನುಮಾನವೇನು?) ಸಮಧಾತುಃ – ಸಪ್ತಧಾತುಗಳು ಸಮವಾಗಿರಬೇಕು. ಮಲಕ್ರಿಯಾಃ - ಮಲಕ್ರಿಯೆಯು ಸಹಜವಾಗಿರಬೇಕು. ಪ್ರಸನ್ನ-ಆತ್ಮ-ಇಂದ್ರಿಯ-ಮನಾಃ-ಆತ್ಮ, ಇಂದ್ರಿಯ, ಮನಸ್ಸು ಎಲ್ಲವೂ ಪ್ರಸನ್ನವಾಗಿರಬೇಕು.

*(ಮುಂದುವರಿಯುತ್ತದೆ)* ★

# ಲಿಂಗಾಂಗ ಸಮರಸ

- ಶಿ.ಬ. ಪುಣೇದ
೪೮, ಮಹಾಂತೇಶ ನಗರ,
ಬೆಳಗಾವಿ - ೫೯೦೦೧೬.

*''ಲಿಂಗಾಂಗಿಗಳೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ*
*ನೀವು ಲಿಂಗಾಂಗಿಗಳೆಂತಾದಿರಿ ಹೇಳಿರಣ್ಣಾ,*
*ಅರಿಯದಿರ್ದಡೆ ಕೇಳಿರಣ್ಣಾ, ಅಂಗ-ಲಿಂಗವಾದ ಭೇದವ,*
*ಪರದೈವ ನೆನೆಯದೆ, ಪರಸ್ತ್ರೀಯರ ಮುಟ್ಟದೆ,*
*ಪರದ್ರವ್ಯವ ಅಪಹರಿಸದೆ, ಪರನಿಂದನೆ ಮಾಡದೆ,*
*ಪರಹಿಂಸೆಗೊಡಂಬಡದೆ, ಪರಪಾಕವ ಮುಟ್ಟದೆ,*
*ಪರಿವಾದವ ಕಲ್ಪಿಸದೆ, ಪರಾತ್ಪರವಾದ ಸತ್ಯಶುದ್ಧ ಕಾಯಕಮಾಡಿ,*
*ನಿರ್ವಂಚಕತ್ವದಿಂದ ಗುರುಲಿಂಗ-ಜಂಗಮಕ್ಕೆ ಸಮರ್ಪಿಸಿ*
*ಅವರಿಗೆ ಅತಿಭೃತ್ಯರಾಗಿ ಆಚರಿಸುವವರೆ*
*ಲಿಂಗಾಂಗಗಳು ನೋಡಾ ಕಲಿದೇವರ ದೇವಾ''* ಮಡಿವಾಳ ಮಾಚಿದೇವ

ಶಿವ - ಶಕ್ತಿಸಂಪುಟದ ದರ್ಶನ ಬೋಧಿಸುವ ಲಿಂಗಾಯತ (ಲಿಂಗವಂತ) ಧರ್ಮವು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ಈ ಧರ್ಮದ ಪಾರಿಭಾಷಿಕ ಶಬ್ದಗಳಾದ 'ಲಿಂಗ' 'ಅಂಗ' ಪದಗಳು ಸಾಂಕೇತಿಕವಾದ ಅರ್ಥಗಳನ್ನು ಹೊಂದಿವೆ ''ಲಿಂಗ'' ವೆಂದರೆ ಸೃಷ್ಟಿಯ ಉತ್ಪತ್ತಿ-ಸ್ಥಿತಿ-ಲಯಕ್ಕೆ ಕಾರಣವಾದ ಚೈತನ್ಯ. ಅವಿರಳಜ್ಞಾನಿ ಚನ್ನಬಸವಣ್ಣನವರು ಹೇಳಿದಂತೆ, ಹೇಳುವಂತೆ ಲಿ. ಕಾರವೆ ಶೂನ್ಯ. ಬಿಂದುವೆ ಲೀಲೆ, ಗ ಕಾರವೆ ಚಿತ್ತ. ಹೀಗಾಗಿ ಲಿಂಗವಂತರಿಗೆ ಅದು ಆರಾಧ್ಯ ದೈವ. ''ಇಷ್ಟಲಿಂಗ'' ವೆ. ಅವರಿಗೆ ಪರಾತ್ಪರ ವಸ್ತು. ಪರಮಾತ್ಮ. ''ಆದಿ ಅನಾದಿ ಇಲ್ಲದಂದು, ಚರಾಚರವಸ್ತು ರಚನೆ ಬಾರದಂದು ಯಾವುದು ಇತ್ತೋ, ಇಲ್ಲದಂತೆ'' ಅದು ಲಿಂಗ. ಹೀಗೆ ಲಿಂಗಪದದ ವ್ಯಾಪ್ತಿಯನ್ನು ಕಾಣುತ್ತೇವೆ. ಭರತವರ್ಷದ ಪರಂಪರೆಯಲ್ಲಿ ಅನಾದಿ ಕಾಲದಿಂದ ಹರಪ್ಪಾ, ಮೊಹಂಜೋದಾರೊ ಸಂಸ್ಕೃತಿ ಹೇಳುವಂತೆ ದೇವರನ್ನು ಲಿಂಗರೂಪದಲ್ಲಿ ಭಾರತೀಯರು ಕಾಣುತ್ತಾರೆ. ಜೀವನ ಶೈಲಿ ಬೆಳೆದಂತೆ ಅದರ ಒಳಗುಟ್ಟು ಬೆಳಕಿಗೆ ಬಂದಂತೆ ಲಿಂಗದ ಸ್ವರೂಪವೂ ರೂಪಾಂತರಗೊಂಡು ವೈಯಕ್ತಿಕ ವಿಕಾಸವನ್ನು ಗಮನದಲ್ಲಿಟ್ಟು, ದಲ್ಲಾಳಿಗಂತೆ ಉಪಟಲ ಕೊಡುವ ಪುರೋಹಿತ ಶಾಹಿಯನ್ನು ಹತ್ತಿಕ್ಕಲು ೧೨ನೆಯ ಶತಮಾನದಲ್ಲಿ ಬಸವಾದಿ ಶಿವಶರಣರು 'ಇಷ್ಟಲಿಂಗ' ವೆಂಬ ಪೂಜ್ಯವಸ್ತುವನ್ನು ಕಂಡುಕೊಂಡರು.

ಉತ್ಪತ್ತಿ-ಸ್ಥಿತಿ-ಲಯಗಳನ್ನು ನಾವು ಯಾವತ್ತೂ ಚರಾಚರ ವಸ್ತುಗಳಲ್ಲಿ ಕಾಣುತ್ತೇವೆ. ತರುಲತೆಗಳಲ್ಲಿ ಚಟುವಟಿಕೆ ಇದೆ. ಚೈತನ್ಯವಿದೆ. ಜಡವಸ್ತುಗಳಲ್ಲಿ ಆ ಚೈತನ್ಯ ಸೂಪ್ತರೂಪದಲ್ಲಿ ಕಾಣುತ್ತೇವೆ ಆಟಂಬಾಂಬ್ ರೂಪದಲ್ಲಿ. ಉದಾಹರಣೆಗಾಗಿ, ಜೀವರಾಶಿಗಳ ಹೃದಯದಲ್ಲಿ ಸದಾ ಗೋಚರಿಸುತ್ತದೆ. ಜ್ಯೋತಿರೂಪವಾಗಿ, ಜೀವಾತ್ಮವಾಗಿ ಅಂದರೆ ನಮ್ಮ ಕಣ್ಣಿಗೆ ಕಾಣುವ ಚರಾಚರ ಬ್ರಹ್ಮಾಂಡವೆಲ್ಲವೂ ಶಿವಮಯವಾಗಿದೆ. ಅದಕ್ಕಾಗಿ ಬಸವಣ್ಣ ವಚನಿಸಿದ್ದು;

*''ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ*
*ಪಾತಾಳದಿಂದವೆ ಅತ್ತತ್ತ ನಿಮ್ಮ ಚರಣ,*
*ಬ್ರಹ್ಮಾಂಡದಿಂದ ಅತ್ತಿತ್ತ ನಿಮ್ಮ ಶ್ರೀ ಮುಕುಟ*
*ಅಗಮ್ಯ ಅಗೋಚರ ಅಪ್ರತಿಮ....* ವೆಂದು ಹೊಗಳಿ

ಅದನ್ನು ಶೂನ್ಯಕ್ಕೆ ಇಳಿಸಿ ಚುಳುಕಾಗಿಸಿ **'ಇಷ್ಟಲಿಂಗ'** ಎಂದು ಹೆಸರಿಸಿ. ವೈಯಕ್ತಿಕ ದೈವವೆಂದು ಪ್ರತಿ ವ್ಯಕ್ತಿಗಳ ಜಾತಿ, ಮತ,ಲಿಂಗ, ... ಬೇಧವಿಲ್ಲದೆ ಕರಸ್ಥಳಕ್ಕೆ ನೀಡಿ ಸಾಧನೆ ಗೈಯಲು ಬೋಧಿಸುತ್ತಾರೆ. ಲಿಂಗಾಯತ (ಲಿಂಗವಂತ) ಧರ್ಮದಲ್ಲಿ, ಅದಕ್ಕೇನೆ ದೇಹವೇ ದೇಗುಲವೆಂದು, ಹೃದಯವೇ ಲಿಂಗವೆಂದು ಆಚಾರ-ವಿಚಾರಗಳೇ ಪುಷ್ಪಾದಿಗಳೆಂದೂ, ಆನಂದಾದಿಗಳೇ, ಫಲಗಳೆಂದು ತಿಳಿಸುತ್ತಾರೆ.

ಇನ್ನು **'ಅಂಗ'** ವೆಂದರೆ ಶಿವಕೃಪೆಗೆ ಪಾತ್ರನಾದ ಶರೀರಧಾರಿ ಜೀವಾತ್ಮ. ಅದಕ್ಕಾಗಿ ಇಷ್ಟಲಿಂಗ ದೀಕ್ಷೆ ಪಡೆದ ಭಕ್ತನಿಗೆ ಹಾಗೆ ಬೋಧಿಸುವದು. ನಾವು ಈ ಮೊದಲೇ ನೋಡಿದಂತೆ ಪರಮಾತ್ಮ ಅಣು-ರೇಣು-ತ್ರಿಣಕಾಷ್ಟದಲ್ಲಿ ತುಂಬಿದ್ದಾನೆ. ಪ್ರತಿ ಜೀವಾತ್ಮನ ಹೃದಯದಲ್ಲಿ ಸೂರೆಗೊಂಡಿದ್ದಾನೆ. ಅಂದಾಗ ದೇವರನ್ನು ಗುಡಿ





ಗುಂಡಾರಗಳಲ್ಲಿ, ಬೆಟ್ಟ ತೀರ್ಥ ಕ್ಷೇತ್ರಗಳಲ್ಲಿ ಹುಡುಕುವ ಅಗತ್ಯವಿದೆಯೇ? ಇಲ್ಲ.

*''ಮರನ ಹೂವ ಕೊಯಿದು ಮರಕ್ಕೇರಿಸಿ*
*ನದಿಯುದಕವ ನದಿಗರ್ಪಣ ಮಾಡಿ*
*ಕರುವನಗಲಿಸಿ ತಾಯ ಮರುಗಿಸಿ*
*ಮೊಲೆಹಾಲ ಕರೆದುಣ ಬೇಡವೊ''*

ಎಂದಿದ್ದಾರೆ ಬಸವಣ್ಣ ಹಾಗೆ ನೋಡಿದರೆ ಮಾನವನಿಗೆ ತನ್ನ ಸ್ವಂತದ್ದೆನ್ನುವದೇನೂ ಇಲ್ಲ. ಎಲ್ಲವೂ ಶಿವನ ದಯೆ, ಕರುಣೆ ;

*''ಇಳಿ ನಿಮ್ಮಿದಾನ, ಬೆಳೆ ನಿಮ್ಮದಾನ*
*ಸುಳಿದು ಬೀಸುವ ಗಾಳಿ ನಿಮ್ಮದಾನ*
*ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳೇನೆಂಬೆ''*

ಎಂದು ದೇವರ ದಾಸಿಮಯ್ಯ ದೇವನಿಗೆ ದಾನಕೊಟ್ಟೆನೆನ್ನುವ ಮಾನವರನ್ನು ತರಾಟೆಗೆ ತೆಗೆದುಕೊಂಡಿದ್ದಾನೆ. ದೇವನಿಂದಲೇ ಪಡೆದು ದೇವನಿಗೆ ಅರ್ಪಿಸುವವೆಂದು ಜಂಬ ಕೊಚ್ಚಿಕೊಳ್ಳುವ ಜಾಣ ಕೋಣರು ನಾವು.

ಪರಮಾತ್ಮನು ಸರ್ವವ್ಯಾಪಿ, ಕರುಣಾಮಯಿ, ಸರ್ವಜ್ಞ ನಿರಾಕಾರನಾಗಿ ಅಗೋಚರನಾದರೂ ಪ್ರತಿಜೀವಿಯಲ್ಲಿಯೂ ಕಾಣೆ ಸಿಗುತ್ತಾನೆ. ಸದ್ಭಕ್ತಿ, ಸನ್ನಡತೆ, ಹೃದಯ ವಿಶಾಲತೆ, ಪರೋಪಕಾರತ್ವ ಈ ಸದ್ಗುಣಗಳ ರೂಪದಲ್ಲಿ ವ್ಯಕ್ತವಾಗಿದ್ದಾನೆ.

ಅದು ಕಾರಣ ಪರಮಾತ್ಮನ ಕಿಂಚಿಜ್ಞನಾದ ಜೀವಾತ್ಮ (ಅಂಗನು) ಅವನದೇ ರೂಪಾದ ಕಾರಣ ವಿಶಾಲಾತ್ಮನಾದ ಸಮಾಜವೆಂಬ ಜಂಗಮತ್ವದಲ್ಲಿ ಸಮರಸಗೊಳ್ಳುವಂತೆ ತನ್ನ ನಡತೆಗಳನ್ನು ಹೊಂದಿಸಿ ಏಕರೂಪವಾಗುವದೇ ಲಿಂಗಾಂಗ ಸಮರಸವೆನ್ನಿಸಿಕೊಳ್ಳುವದಿಲ್ಲವೇ? ಹೌದು, ವ್ಯಕ್ತಿಸಮಷ್ಟಿಗೆ ತಕ್ಕಂತೆ ಹೊಂದಿಕೊಂಡು ಬಾಳಬೇಕು.

ಈ ವಚನದಲ್ಲಿ ಅದನ್ನೇ ಮಡಿವಾಳ ಮಾಚಿದೇವ ನಮಗೆಲ್ಲ ಕೇಳಿಸಿದ್ದು. ಅಂಗ-ಲಿಂಗಗಳ ತಿಳಿವಳಿಕೆ ಮೊದಲು ಕೊಡುವನು. ತನ್ನ ದೇಹವೇ ದೇಗುಲವಾದಾಗ ಅನ್ಯ ದೈವಂಗಳಿಗೆ ಎರಗುವ ಪ್ರಶ್ನೆಯೇ ಇಲ್ಲ ಎನ್ನುವ ಧಾಟಿಯಲ್ಲಿದೆ ಅವನವಾದ. ಪರಸ್ತ್ರೀ ಪರದ್ರವ್ಯಕ್ಕೆ ಆಶೆಪಡದೆ, ಎರಡನೆಯವರ ನಡತೆಬಗ್ಗೆ ಟೀಕೆ ಮಾಡದೆ ತನ್ನ ಸಹಚರರಿಗೆ ನೋವಾಗದಂತೆ ವರ್ತಿಸಬೇಕೆಂದು ಹೇಳುತ್ತಾನೆ. ''ಪರರ ಚಿಂತೆ ನಮಗೇಕೆ, ನಮ್ಮ ಚಿಂತೆ ನಮಗೆ ಸಾಲದೆ'' ಎನ್ನುವ ಬಸವಣ್ಣನವರ ವಚನದ ದಾಟಿಯಂತೆ ತನ್ನ ಅಂತರಾತ್ಮಕ್ಕೆ ಒಪ್ಪಿಗೆಯಾಗುವ ರೀತಿ ತನ್ನ ನಡೆ-ನುಡಿಗಳನ್ನು ರೂಪಿಸಿಕೊಳ್ಳಬೇಕೆಂದು ಹೇಳುವನು. ಶಿವನಿಗೆ ಒಪ್ಪಿಗೆಯಾಗುವಂತೆ ಸತ್ಯ ಶುದ್ಧ ಪ್ರಾಮಾಣಿಕವಾಗಿ ದುಡಿದುಗಳಿಸಬೇಕೆಂದು ಹೇಳುವುದಲ್ಲದೆ. ತನ್ನ ಗುರು ಸಮಾನವಾದ ಹಿರಿಯರಿಗೂ (ಹಿರಿಯರಿಗೂ) ಸಹೃದಯದ ಪ್ರತಿರೂಪವಾದ ತನ್ನ ಇಷ್ಟಲಿಂಗಕ್ಕೂ ಹಾಗೂ ಜಂಗಮರೂಪಿ ಸಮಾಜಕ್ಕೂ ತನ್ನಗಳಿಕೆಯನ್ನು ಅರ್ಪಿಸಿ ಬಂಧು ಬಾಂಧವರನ್ನೊಡಗೂಡಿ ದಾಸೋಹ ಮಾಡಬೇಕೆಂದು ತಿಳಿಸುತ್ತಾನೆ. ಆಗ ಸಹಜವಾಗಿ ನಾನು, ನನ್ನದು, ನನ್ನಿಂದ ಎಂಬ ಅಹಂಭಾವ ಉಡಿಗಿ, ಅಳಿದು ಕಿಂಕರತ್ವ ತನ್ನಲ್ಲಿ ತಾನೇ ಓಡಮೂಡುವದೆಂದೂ ಅಭಿಪ್ರಾಯಪಟ್ಟು ಇದೇ ಲಿಂಗಾಂಗಿಗಳು ಆಚರಿಸುವ ಸರಿಯಾದ ನಡುವಳಿಕೆ ಎಂದು ಘಂಟಾಘೋಷವಾಗಿ ಹೇಳಿದ್ದುಂಟು. ಈ ವಚನದಲ್ಲಿ ಇಂತಹ ಸ್ಪಷ್ಟನಿಲುವಿನ ಕಾರಣಕ್ಕಾಗಿ ಬಸವಣ್ಣನ ಬಲಗೈ ಭಂಟನೆನಿಸಿದ ಮಡಿವಾಳ ಮಾಚಿದೇವ ಅನುಭವ ಮಂಟಪದಲ್ಲಿ ಎದ್ದು ಕಾಣುವ ವ್ಯಕ್ತಿ ಎನಿಸಿದ್ದ.

ಉತ್ತರ ಕರ್ನಾಟಕದ ವಿಜಾಪುರ ಸಮೀಪದ ದೇವರ ಹಿಪ್ಪರಗಿಯವನಾದ ಅಗಸರ ಮಾಚಣ್ಣ ಬಸವಣ್ಣ ಸಾಧಿಸಿದ ಹೃದಯ ಪರಿವರ್ತಿತ ಕಲ್ಯಾಣ ಪಟ್ಟಣವನ್ನು ಸೇರಿ ಮಡಿವಾಳ ಕಾಯಕ ಕೈಕೊಂಡು ಮಾಚಿದೇವ ಎಂದೆನಿಸಿದ. ಅಲ್ಲಿಯ ಶರಣರ ಮನಗೆದ್ದು, ನಿಖರತೆಯ ನುಡಿಗಳಿಂದ ಜನರನ್ನು ಎಚ್ಚರಿಸಿ ನೀತಿಯ ಪಥಕ್ಕೆ ತಂದು ಅವರ ನಡೆ-ನುಡಿಗಳನ್ನು ಮಡಿ ಮಾಡಿದ ಭೂತ. ಧೀರತೆಯಲ್ಲಿ ಗಣಾಚಾರ ವೃತ್ತಿ ಸ್ವೀಕರಿಸಿದ ಇವನು ಕಲ್ಯಾಣ ಕ್ರಾಂತಿಯ ನಂತರ ವಚನ ಸಾಹಿತ್ಯ ರಕ್ಷಿಸುತ್ತ ಬೆಳಗಾವಿ ಜಿಲ್ಲೆಯ ಮುರಗೋಡ ಸಮೀಪದ ಕಾದರವಳ್ಳಿಯಲ್ಲಿ ನಡೆದ ಘೋರ ಕಾಳಗದಲ್ಲಿ ತೀರ್ವ ಘಾಯಗೊಂಡು ಗೋಡಚಿಯಲ್ಲಿದ್ದು ಐಕ್ಯ ಹೊಂದಿರಬೇಕೆಂದು ಹೇಳಲಾಗುತ್ತಿದೆ. ಇವರ ಹೆಸರಿನಲ್ಲಿ ದೇವರಹಿಪ್ಪರಗಿ ಹಾಗೂ ಕಾರಿಮನಿಗಳಲ್ಲಿ ಸಮಾಧಿಗಳಿವೆ. ಸ್ಮಾರಕಗಳಾಗಿ, ಅಲ್ಲಿ ನಿತ್ಯ ಭೆಟ್ಟಿಯಿತ್ತು ಅಭಿಮಾನಿಗಳು, ಭಕ್ತಿ ಸಲ್ಲಿಸಿ ಧನ್ಯರಾಗುತ್ತಾರೆ. ಹೀಗೆ ೧೨ನೆಯ ಶತಮಾನದ ಬಸವಣ್ಣನ ಕಸರತ್ತು ೨೧ನೆಯ ಶತಮಾನದುದ್ದಕ್ಕೂ ಹರಿದು ಬರುವದನ್ನೂ ನಾವು ಕಾಣುತ್ತೇವೆ. ಲಾತೂರಿನ (ಮಹಾರಾಷ್ಟ್ರ) ಆಸುಪಾಸಿನ ಭಕ್ತರು ದೇವರ ಹಿಪ್ಪರಗಿಯಲ್ಲಿಯ ಸಮಾಧಿ ದರ್ಶನ ಪಡೆಯಲು ಬಂದುದು, ಬರುತ್ತಿರುವುದು ಇದಕ್ಕೆ ಜ್ವಲಂತ ಸಾಕ್ಷಿ.

★

# ಮಧುಮೇಹ ಮತ್ತು ದಂತಾರೋಗ್ಯ

– ಡಾ. ಸಿ.ಎ. ಹಿರೇಮಠ
ರಾಣಿಬೆನ್ನೂರು.

ಮೇಲ್ಮಧ್ಯಮ ಮತ್ತು ಅದಕ್ಕಿಂತ ಉನ್ನತ ವರ್ಗದವರ ಕಾಯಿಲೆ ಎನಿಸಿಕೊಂಡಿದ್ದ ಮಧುಮೇಹ ಇಂದು ಬಹುತೇಕ ಮನುಜರ ಮೈಯ್ಯನ್ನಾವರಿಸಿಕೊಂಡಿದೆ. ಸಾಕಷ್ಟು ಶ್ರಮವಹಿಸುವ, ವಿವಿಧ ಚಟುವಟಿಕೆಗಳಲ್ಲಿ ಸದಾಕಾಲ ತೊಡಗಿಕೊಂಡಿರುವ, ತೆಳು ಮೈಕಟ್ಟು ಹೊಂದಿದವರಿಗೆ ಮಧುಮೇಹವೆಂಬುದು ಬಾರದೆಂಬ ಪರಿಕಲ್ಪನೆ ಬಿದ್ದು ಹೋಗಿ ಸದ್ಯೋಜಾತ ಶಿಶುವಿನಿಂದ ಯಾರಿಗಾದರೂ, ಯಾವಾಗಲಾದರೂ ಆಕ್ರಮಿಸಿಕೊಳ್ಳುವ ಈ. ಮಧುಮೇಹ ವಿಶ್ವವ್ಯಾಪಿಯಾಗತೊಡಗಿದೆ. ಪ್ರತಿವರ್ಷ ೧೫.೭ ಮಿಲಿಯನ್‌ನಷ್ಟು ಜನರನ್ನು ಮುಕ್ಕಿಕೊಳ್ಳುವ ಈ ಮಧುಮೇಹ, ೮ ರಿಂದ ೯ ಲಕ್ಷದಷ್ಟು ನೂತನ ರೋಗಿಗಳನ್ನು ದಾಖಲಿಸಿಕೊಳ್ಳುತ್ತದೆ.

ಮಧುಮೇಹ ಪೀಡಿತರಾದಾಗ ಅದು ನರ, ಕಣ್ಣು, ಮೂತ್ರಕೋಶ, ಹೃದಯವೇ ಮೊದಲಾದ ಅಂಗಗಳಿಗೆ ಅನಾಹುತ ಮಾಡಬಲ್ಲದೆಂಬುದು ಬಹುಜನರಿಗೆ ಅರ್ಥವಾಗಿದೆ. ಗಾಯಗಳುಂಟಾದಾಗ ಗಾಯವು ತೀವ್ರ ಮಾಯದೇ ದುರ್ವಾಸನೆ ಸಹಿತ ವಿಪರೀತ ಪರಿಣಾಮಕ್ಕೆಡೆ ಮಾಡುವ ಅಂಶವೂ ಸರ್ವವಿದಿತ. ಇವೆಲ್ಲವುಗಳ ಜೊತೆಗೇ ಮಧುಮೇಹವು ದಂತಾರೋಗ್ಯವನ್ನೂ ಹಾಳು ಮಾಡುವುದು ಸರ್ವೇಸಾಮಾನ್ಯ. ಈ ಕಾಯಿಲೆಯ ಪರಿಣಾಮವಾಗಿ ದಂತರೋಗಗಳು ಉದ್ಭವಿಸುವ, ನಿವಾರಿಸುವ, ಪರಿಹಾರೋಪಾಯಗಳ ಕುರಿತು ಇಲ್ಲಿ ತಿಳಿದುಕೊಳ್ಳೋಣ.

ಮಧುಮೇಹಪೀಡಿತರಿಗೆ ಹಲ್ಲು ಕೊಳೆಯುವುದು, ವಸಡು ರೋಗ, ಲಾಲಾಗ್ರಂಥಿ ನಿಷ್ಕ್ರಿಯತೆ, ಬೂಷ್ಟು ರೋಗ (Fungus Infection), ಅರುಚಿ ಇತ್ಯಾದಿಗಳು ಕಂಡು ಬರುವುವು. ಮಧುಮೇಹದಿಂದ ಬಳಲುವವರು ಈ ಕಾಯಿಲೆ ಪ್ರಾರಂಭವಾದಂದಿನಿಂದ ತಾವು ಪಡೆಯುತ್ತಿರುವ ಚಿಕಿತ್ಸೆ, ಔಷಧೀಯ ವಿವರ, ಹಿನ್ನೆಲೆ, ಯಾವಾಗಲಾದರೂ ಉಪಯೋಗಿಸಿದ, ವೈದ್ಯರಿಂದ ಸೂಚಿತವಾದ ಔಷಧಿಗಳು ಮೊದಲಾದವುಗಳ ಬಗ್ಗೆ ವಿವರಣೆಯನ್ನು ದಾಖಲೆಸಹಿತ ಸಂಗ್ರಹಿಸಿಡಬೇಕು.

ದಂತಗಳು ಒಂದು ರೀತಿ ತೆಳು ಪೊರೆಯಿಂದ ಆವರಿತವಾಗಿದ್ದರೆ ಅದು ಬಹುಶಃ ಬ್ಯಾಕ್ಟೀರೀಯಗಳಿಂದ ಕೂಡಿರುತ್ತದೆ. ಪ್ರತಿ ಬಾರಿ ಸಿಹಿ ಅಥವಾ ಪಿಷ್ಟಯುಕ್ತ ಆಹಾರ ಸೇವಿಸಿದಾಗ ಈ ಬ್ಯಾಕ್ಟೀರಿಯಾಗಳು Dietary Sugar ನಿಂದ ಉತ್ಪತ್ತಿಯಾದ ಒಂದು ವಿಧದ ಆಮ್ಲವನ್ನು ವಿಸರ್ಜಿಸುತ್ತವೆ. ಈ ಆಮ್ಲವು ದಂತದ ಮೇಲ್ಭಾಗದ enamel ನ್ನು ಹಾಳುಗೆಡವುತ್ತದೆ. ಈ ಪ್ರಕ್ರಿಯೆ ಪುನರಾವರ್ತಿತವಾದಾಗ ದಂತಕುಳಿಗಳುಂಟಾಗುತ್ತವೆ. ಮಧುಮೇಹವನ್ನು ಸರಿಯಾಗಿ ನಿಯಂತ್ರಿಸದಿದ್ದರೆ ಹೆಚ್ಚಿನ ಲಾಲಾರಸದ ಮಧುರತೆಯ ಬ್ಯಾಕ್ಟೀರಿಯಾಗಳು ಶೀಘ್ರ ಬೆಳೆಯಲು ಅವಕಾಶವೀಯುತ್ತವೆ. ದಿನಕ್ಕೆರಡು ಬಾರಿ ಫ್ಲೋರೈಡಯುಕ್ತ ಲೇಪನದಿಂದ ಹಲ್ಲುಜ್ಜುವುದರಿಂದ ಈ ಬ್ಯಾಕ್ಟೀರಿಯಾ ಪೊರೆಗಳು ನಾಶವಾಗುತ್ತವೆ. ಅದರಿಂದ ನಾವು ದಂತ ಸಮಸ್ಯೆಗಳಿಂದ ಸುಲಭವಾಗಿ ಪಾರಾಗುತ್ತೇವೆ. ಯಾವಾಗ ಈ ಪೊರೆಯನ್ನು ನಿವಾರಿಸುವಲ್ಲಿ ಅಲಕ್ಷ್ಯ ತೋರುವೆವೋ ಆಗ ಅದು ಗಟ್ಟಿಯಾಗತೊಡಗುತ್ತದೆ. ಇದನ್ನು Tartar ಎಂದು ಕರೆಯುತ್ತೇವೆ. ಈ Tartar ವಸಡಿನ ಮೇಲುಭಾಗವನ್ನು ಎಳೆ ಎಳೆಯಾಗಿ ಆವರಿಸಿದಂತೆ ಇದನ್ನು ಹಲ್ಲುಜ್ಜುವುದರಿಂದ ಹೋಗಲಾಡಿಸುವುದು ಕಷ್ಟವಾಗುತ್ತದೆ. ಒಂದು ಬಾರಿ ಈ ತೆರನಾಗಿ ಗಟ್ಟಿಯಾಗತೊಡಗಿದರೆ ಅದು ಕ್ರಮೇಣ ಇಡೀ ವಸಡಿನ ಆರೋಗ್ಯವನ್ನೇ ಕ್ಷೀಣಿಸುತ್ತದೆ. ತತ್ಪರಿಣಾಮ ಸತತ ಸೋಂಕು ಉಂಟಾಗುತ್ತಲೇ ಇರುತ್ತದೆ. ಮಧುಮೇಹಿಗಳಲ್ಲಿ ಪ್ರತಿರೋಧಕ ಶಕ್ತಿ ಸಾಮಾನ್ಯರಿಗಿಂತ ಕಡಿಮೆ ಇರುತ್ತದೆ. ಇದರಿಂದಾಗಿ ಸೋಂಕು ಪುನರಾವರ್ತನೆಯಾಗುತ್ತಲೇ ಇರುತ್ತದೆ. ಈ ಸೋಂಕು ವಸಡು ಮತ್ತು ದವಡೆ ಎಲುಬಿನ ಮಧ್ಯ ಹಲ್ಲು ಕುಳಿತಿರುವ ಜಾಗವನ್ನು ಆಕ್ರಮಿಸಿ ನರಕ ಎನಿಸುವಷ್ಟು ಹಿಂಸೆ ನೀಡಲಾರಂಭಿಸುತ್ತದೆ. ಮಧುಮೇಹವನ್ನು ಚೆನ್ನಾಗಿ ನಿಯಂತ್ರಿಸಿಕೊಂಡಿರುವಲ್ಲಿ ದಂತಬಾಧೆಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿದ್ದು ಅನಿಯಂತ್ರಿತ ಮಧುಮೇಹಿಗಳ ದಂತಾರೋಗ್ಯದಲ್ಲಿ ಅನೇಕ ಬಗೆಯ ಸಮಸ್ಯೆಗಳನ್ನು ನಾವು ಯಾವಾಗಲೂ ಗಮನಿಸಬಹುದು.





ಲಾಲಾರಸಗ್ರಂಥಿಗಳು ಬಾಯಿಯಲ್ಲಿ ಆಕಸ್ಮಿಕ ಉಳಿದಿರಬಹುದಾದ ಆಹಾರ ಕಣಗಳನ್ನು ಸ್ವಚ್ಛಗೊಳಿಸುತ್ತವೆ. ಬಾಯಿಯು ಜಲೀಯವಾಗಿರಲು ಸಹಕರಿಸುತ್ತವೆ. ಲಾಲಾರಸ ಇಲ್ಲದಿದ್ದರೆ ಬ್ಯಾಕ್ಟೀರಿಯಾಗಳು ಅಗಾಧವಾಗಿ ಬೆಳೆಯುತ್ತವೆ. ಕ್ಯಾನ್ಸರ್‌ಪೀಡಿತರು ಕುತ್ತಿಗೆಯ ಮೇಲ್ಭಾಗದಲ್ಲಿ ವಿಕಿರಣ ಚಿಕಿತ್ಸೆ ಪಡೆಯುವಾಗ, ಶುಷ್ಕಬಾಯಿರೋಗ (Xerostomia) ದಿಂದ ಬಳಲುವವರಲ್ಲಿ, ಲಾಲಾರಸ ಕಡಿಮೆ ಉತ್ಪತ್ತಿ ಆಗುವುದರ ಪರಿಣಾಮವಾಗಿ ದಂತರೋಗಗಳು ಹೆಚ್ಚು ಕಂಡು ಬರುತ್ತವೆ.

ಸಕ್ಕರೆ ರಹಿತ ಚ್ಯೂಯಿಂಗಮ್, ಮಿಂಟುಗಳನ್ನು ಬಾಯಾಡಿಸುವುದು, ಆಗಾಗ ನೀರಿನಿಂದ ಬಾಯಿ ಮುಕ್ಕಳಿಸುವುದು, ಶುಷ್ಕ ಬಾಯಿ ರೋಗವನ್ನು ನಿವಾರಿಸುವಲ್ಲಿ ಸಹಕಾರಿಯಾಗಿರುತ್ತದೆ. ಆಲ್ಕೊಹಾಲ ಮತ್ತು ಕಾಫಿ ಸೇವನೆಯನ್ನು ಪ್ರತಿಬಂಧಿಸಿದಲ್ಲಿ ಅದರಿಂದ ಸಹ ಶುಷ್ಕ ಬಾಯಿ ರೋಗ ಲಕ್ಷಣ ಕಡಿಮೆಯಾಗುವುದು.

ಬಾಯಿಯಲ್ಲಿ ಬ್ಯಾಕ್ಟೀರಿಯಾ, ಫಂಗಸ್, ವೈರಸ್‌ಗಳು ಸಹಜವಾಗಿ ಇರುತ್ತವೆ. ನಾವು ನಮ್ಮ ಬಾಯಿಯನ್ನು ಶುಭ್ರವಾಗಿ ಇಟ್ಟುಕೊಳ್ಳದಿದ್ದರೆ ಕಫ ಬ್ಯಾಕ್ಟೀರಿಯಾಗಳು ವೈರಸ್ ಮೊದಲಾದವುಗಳು ಚುರುಕಾಗಿಬಿಡುತ್ತವೆ. ಒಳಗಿದ್ದೇ ದೇಹ ಪ್ರತಿರೋಧಕ ಶಕ್ತಿಯನ್ನು ಕುಗ್ಗಿಸಿ ತಾವೇ ಬಲಿಷ್ಠವಾಗಿ ಬೆಳೆದು ದಂತರೋಗವನ್ನು ಹುಟ್ಟು ಹಾಕುತ್ತವೆ.

Oral candidiasis ಎಂಬ ಫಂಗಸ್‌ನಿಂದ ಬರುವ ದಂತರೋಗವು ಮಧುಮೇಹಿಗಳಲ್ಲಿ ಹಾಗೂ ಕೃತಕ ದಂತಪಂಕ್ತಿಗಳನ್ನು ಧರಿಸುವವರಲ್ಲಿ ಹೆಚ್ಚು ಕಾಣಬರುತ್ತದೆ. ನೀವು ಧೂಮಪಾನಿಗಳಾಗಿದ್ದಲ್ಲಿ, ಮಧುಮೇಹಿಗಳಾಗಿದ್ದಲ್ಲಿ ವಿಪರೀತ ಪ್ರತಿಜೀವಕ (Antibitics) ಪುನಃ ಪುನಃ ಸೇವಿಸುತ್ತಿದ್ದಲ್ಲಿ, ಲಾಲಾರಸ ಫಂಗಸನಿಂದ ಪೀಡಿತರಾಗುವ ಸಂಭವ ಅಧಿಕ. ಲಾಲಾರಸ ಕಡಿಮೆ ಇದ್ದಾಗ, ಇರುವ ಲಾಲಾರಸದಲ್ಲಿ ಸಕ್ಕರೆ ಅಂಶ ಹೆಚ್ಚಿದಾಗ ಬಾಯಿ, ವಸಡುಗಳ ಬಳಿ ಬಿಳಿ ಅಥವಾ ಕೆಂಪು ಬಣ್ಣದ ಗಾಯಗಳನ್ನುಂಟು ಮಾಡುವುದು. ಕೆಲವು ಸಲ ಇದು ನಾಲಿಗೆಗೂ ಅಂಟಿಕೊಳ್ಳಬಹುದು.

ದಂತಕ್ಕೆ ಸಂಬಂಧಿಸಿದಂತೆ ಮಧುಮೇಹಪೀಡಿತರಾಗಲಿ, ಅಧಿಕರಕ್ತದೊತ್ತಡ ಪೀಡಿತರಾಗಲಿ ಮಾತ್ರ ಸ್ವಚ್ಛತೆ-ಶುಭ್ರತೆ ಕಾಯ್ದುಕೊಳ್ಳಬೇಕೆನ್ನುವುದು ಶುದ್ಧ ಮೂರ್ಖತನವಾಗುತ್ತದೆ. ಸದಾಕಾಲವೂ ರೋಗಿಯಾಗಲಿ-ನಿರೋಗಿಯಾಗಲಿ ದಂತಸ್ವಾಸ್ಥ್ಯವನ್ನು ಕಾಯ್ದುಕೊಳ್ಳಲೇಬೇಕು. ★

## ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಸನ್ಮಾನ್ಯರೇ,

ಕಳೆದ ನಲವತ್ತು ವರ್ಷಗಳಿಂದ, ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಮತ್ತು ಮಾರ್ಗದರ್ಶನದಿಂದ ಶ್ರೀಮಠದ ಮುಖವಾಣಿಯಾಗಿ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಮಾಸಪತ್ರಿಕೆಗೆ ಆಜೀವ ಚಂದಾದಾರರಾಗುವುದರ ಮೂಲಕ ಪತ್ರಿಕೆಯ ಮುನ್ನಡೆಗೆ ಕಾರಣಕರ್ತರಾಗಿದ್ದೀರಿ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇವೆ.

ದಿನೇ ದಿನೇ ಮುದ್ರಣ ಸಾಮಗ್ರಿಗಳ ವೆಚ್ಚ ಅಧಿಕವಾಗುತ್ತಿದ್ದು ಅದಕ್ಕನುಗುಣವಾಗಿ ಪತ್ರಿಕೆಯ ಮುದ್ರಣದ ಬೆಲೆಯೂ ಹೆಚ್ಚಾಗುತ್ತಿದೆ. ರೂ. ೫೦೦/೬೦೦ಗಳನ್ನು ನೀಡಿದ ಆಜೀವ ಚಂದಾಹಣವನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿದ್ದು ಅದರಿಂದ ಬರುವ ಬಡ್ಡಿ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲು ಕಷ್ಟಸಾಧ್ಯವಾಗಿದೆ. ಈಗ ಬ್ಯಾಂಕಿನ ಬಡ್ಡಿ ದರವು ಕಡಿಮೆ ಆಗಿರುವ ವಿಚಾರ ತಮಗೆ ತಿಳಿದಿದೆ. ಪ್ರಸ್ತುತ ೫೦೦ ರೂ. ಠೇವಣಿಗೆ ೩.೫೦ ರೂ. ಹಾಗೂ ೬೦೦ ರೂ.ಗಳಿಗೆ ೩೯ ರೂ ಬರುತ್ತದೆ. ಈ ಬಡ್ಡಿ ಹಣದಿಂದ ೧೨ ಸಂಚಿಕೆಗಳಿಗೆ ತಗಲುವ ವೆಚ್ಚವನ್ನು ಸರಿದೂಗಿಸಲು ಕಷ್ಟವಾಗಿದೆ. ಪ್ರಸ್ತುತ ಶೇಕಡ ೫೦ರಷ್ಟು ನಷ್ಟವಾಗುತ್ತಿದೆ ಎಂಬ ಅಂಶವನ್ನು ವಿನಯಪೂರ್ವಕವಾಗಿ ತಮ್ಮ ಗಮನಕ್ಕೆ ತರಬಯಸುತ್ತೇವೆ.

ಪ್ರಸ್ತುತ ಶ್ರೀಮಠದಲ್ಲಿ ೮೦೦೦ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವ್ಯಭವಿಷ್ಯವನ್ನು ರೂಪಿಸುವಲ್ಲಿ ಪರಮಪೂಜ್ಯ ಶ್ರೀಗಳವರು ತಮ್ಮನ್ನು ಅರ್ಪಿಸಿಕೊಂಡು ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ತಾವು ದಯವಿಟ್ಟು ಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಶ್ರೇಷ್ಠ ಸೇವೆಯನ್ನು ಗಮನದಲ್ಲಿಟ್ಟುಕೊಂಡು 'ಸಿದ್ಧಗಂಗಾ' ಪ್ರಕಟಣೆಗೆ ಒದಗಿರುವ ಆರ್ಥಿಕ ಸಂಕಷ್ಟವನ್ನು ದೂರಮಾಡಿ ಸಿದ್ಧಗಂಗಾ ಮತ್ತಷ್ಟು ಅರ್ಥಪೂರ್ಣವಾಗಿ ಪ್ರಕಟವಾಗಲು ನೆರವು ಮತ್ತು ಸಹಕಾರ ನೀಡಬೇಕಾಗಿ ಕಳಕಳಿಯಿಂದ ಕೋರುತ್ತೇವೆ.

ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಪ್ಪಣೆಕೊಡಿಸಿದಂತೆ ಜುಲೈ ೨೦೦೪ರಿಂದ ಆಜೀವ ಚಂದಾಹಣವನ್ನು ೬೦೦ ರಿಂದ ೧೦೦೦ ರೂ.ಗಳಿಗೆ ಹೆಚ್ಚಿಸಲಾಗಿದೆ.

ಈಗಾಗಲೇ ಆಜೀವ ಚಂದಾದಾರಾಗಿರುವ ಪತ್ರಿಕಾಭಿಮಾನಿಗಳು ೧೦೦೦ ರೂ.ಗಳಿಗೆ ಸರಿಹೊಂದುವಂತೆ. ಅಂದರೆ ಹಿಂದೆ ಸಂದಾಯ ಮಾಡಿದ್ದ ೫೦೦ ರೂ. ಮತ್ತು ೬೦೦ ರೂ.ಗಳನ್ನು ಕಳೆದು ಉಳಿದ ಹಣವನ್ನು ರೂ. ೫೦೦ ಮತ್ತು ರೂ. ೪೦೦ಗಳನ್ನು ನಗದು/ಎಂಓ/ಡಿ.ಡಿ./ಚೆಕ್ ಮೂಲಕ ಸಿದ್ಧಗಂಗಾ ಮಾಸಪತ್ರಿಕೆಯ ಹೆಸರಿನಲ್ಲಿ ಕಳುಹಿಸಬೇಕಾಗಿ ಕೋರಲಾಗಿದೆ. ತಾವು ಹಣ ಕಳುಹಿಸುವಾಗ ತಮ್ಮ ವಿಳಾಸದಲ್ಲಿ ಎಲ್.ಎಂ. ಸಂಖ್ಯೆಯನ್ನು ತಪ್ಪದೆ ನಮೂದಿಸಬೇಕು. ತಾವು ನಮ್ಮ ಮನವಿಗೆ ಸ್ಪಂದಿಸಿ ಪತ್ರಿಕೆಯ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸುವಿರೆಂದು ಭಾವಿಸಿದ್ದೇವೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು



# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

## ಭಾಗ-೧೬

ಪುಣ್ಯಶ್ಲೋಕರೂ ಕಾರುಣ್ಯಶೀಲರೂ ಆದ ಶ್ರೀ ಸಿದ್ಧಲಿಂಗ ಶಿವಯೋಗಿಗಳವರು ಗೂಳೂರಿನಲ್ಲಿ ಲಿಂಗಲೀಲಾ ವಿಲಾಸದಿಂದಿರುತ್ತಿರುವಾಗ ತಮ್ಮೂರಿಗೆ ಬಿಜಯಂಗೈಸಲು ತುಮಕೂರಿನ ಮಹಾಭಕ್ತರು ಒಂದು ಬಿನ್ನಹಮಾಡುತ್ತಾರೆ. ಆ ಭಕ್ತರ ಪ್ರಾರ್ಥನೆಯನ್ನು ಮಾನ್ಯಮಾಡಿ ಶಿವಯೋಗಿಗಳು ಸಕಲ ಶಿಷ್ಯವಿರತರೊಡನೆ ಹೊರಡುತ್ತಾರೆ. ಪಂಚಮಹಾವಾದ್ಯ ಸಮೇತರಾಗಿ ಭಕ್ತಜನಯುತರಾಗಿ ಮೆರವಣಿಗೆಯೊಂದಿಗೆ ಭಕ್ತರು ಪುರಪ್ರವೇಶ ಮಾಡಿಸುತ್ತಾರೆ. ಊರಿನ ತೆಂಕಣದಿಕ್ಕಿನಲ್ಲಿರುವ ಬಸವೇಶ್ವರ ದೇವಾಲಯಕ್ಕೆ ಕರೆತಂದು ಶಿವಯೋಗಿಗಳನ್ನು ಅಲ್ಲಿ ಮೂರ್ತಗೊಳಿಸುತ್ತಾರೆ.

ಅಲ್ಲಿಗೇ ಸಕಲ ಭಕ್ತರೂ ಐತಂದು ತಂತಮ್ಮ ಭಕ್ತಿ ಕಾಣಿಕೆಗಳನ್ನು ಶಿವಯೋಗಿಗಳವರ ದಿವ್ಯಪಾದಕ್ಕೆ ಅರ್ಪಿಸಿ ಆಶೀರ್ವಾದವನ್ನು ಪಡೆದುಕೊಂಡು ಕೊಂಡಾಡುತ್ತಿರುತ್ತಾರೆ. ಆಗ ಆ ಊರಿನ ವೈಷ್ಣವ ಮತಸ್ಥನಾದ ಮಾಧವನೆಂಬುವನು ಹೀನಬುದ್ಧಿಯುಳ್ಳವನಾಗಿ ಸಿದ್ಧಲಿಂಗೇಶ್ವರರ ಶಿವಯೋಗಶಕ್ತಿಯನ್ನು ಪರೀಕ್ಷಿಸಬೇಕೆಂದು ಬರುತ್ತಾನೆ. 'ಎಲೈ ಶಿವಯೋಗಿಯೆ! ಈ ಎರಡು ಭಸ್ಮದಗಟ್ಟಿಗಳ ಪೈಕಿ ಒಂದನ್ನು ಸ್ಫಟಿಕಲಿಂಗವನ್ನಾಗಿ ಮಾಡಿಕೊಟ್ಟರೆ ನಿನ್ನ ಭಕ್ತನಾಗುವೆನು'' ಎಂದು ಆ ಎರಡು ಭಸ್ಮದ ಗಟ್ಟಿಗಳನ್ನು ಮುಂದೆ ಇಟ್ಟು ನಿಲ್ಲುತ್ತಾನೆ. ಆಗ ಪಂಚಪರುಷಶಕ್ತಿ ಸಂಪನ್ನರಾದ ಶಿವಯೋಗಿಗಳು ಆ ಎರಡರಲ್ಲಿ ಒಂದನ್ನು ತಮ್ಮ ಶಿವಹಸ್ತದಿಂದ ಮುಟ್ಟಿ ತೆಗೆದುಕೊಂಡು ಆ ವೈಷ್ಣವನ ಕೈಗೆ ಕೊಡುತ್ತಾರೆ. ಶಿವಯೋಗಿಗಳ ಶಿವ ಹಸ್ತಪರುಷಶಕ್ತಿಯು ಸೋಂಕಿದೊಡನೆಯೇ ಅದು ವೃತ್ತಗೋಮುಖಕಾರಾದಿ ಪಂಚಸೂತ್ರಘಟಿತ ಲಿಂಗವಾಗಿ ಹೊಳೆಯುತ್ತದೆ. ನೆರೆದ ಭಕ್ತರೆಲ್ಲರೂ ಕಂಡು ಕಡುಚೋದ್ಯವಡೆಯುತ್ತಾರೆ. ಹಿಂದೆ ಬಸವೇಶ್ವರರು ಬದನೆಕಾಯಿಯನ್ನು ಲಿಂಗವನ್ನಾಗಿ ಮಾಡಿದಂತೆ, ಮಲ್ಲಿಸೆಟ್ಟಿ ಎಂಬುವನಿಗೆ ಬಳ್ಳಲಿಂಗವಾದಂತೆ, ವೀರಗೊಲ್ಲಳಿಗೆ ಕುರಿಯ ಹಿಕ್ಕೆ ಲಿಂಗವಾದಂತೆ, ಮಿಂಡನಾಗಯ್ಯನೆಂಬುವನಿಗೆ ನಿಂಬೆಯಫಲ ಲಿಂಗವಾದಂತೆ, ಸೌಂದರ ನಂಬಿಪರವೆನಾಚಿಗೆ ಹೂವನ್ನು ಲಿಂಗವನ್ನಾಗಿ ಮಾಡಿ ತೋರಿದಂತೆ, ದಕ್ಷಿಣಾಪುರದ ಬೇಳೆಯಯ್ಯನೆಂಬುವನು ವೇಶ್ಯೆಯ ಕೈಯಲ್ಲಿದ್ದ ಮೀನನ್ನು ಚಂದ್ರಕಾಂತಲಿಂಗವನ್ನಾಗಿ ಮಾಡಿದಂತೆ, ಕಾಟನೆಂಬುವನ ಕಾಟದಿಂದ ಕೆರೆಗೆಬಿದ್ದ ಮೊಲವು ಲಿಂಗವಾದಂತೆ ನಮ್ಮ ಈ ಸಿದ್ಧೇಶಗುರುವು ವೈಷ್ಣವಂಗೆ ಭಸ್ಮದ ಘಟ್ಟಿಯನ್ನು ಲಿಂಗವನ್ನಾಗಿ ಮಾಡಿದುದು ಅದ್ಭುತವಾಗಿದೆ ಎಂದು ಕೊಂಡಾಡುತ್ತಿದ್ದರು. ಅಷ್ಟು ಹೊತ್ತಿಗೆ ಮಹಾಸಂಜೆಯಾಯಿತು.

ಆ ಹೊತ್ತಿಗೆ ಪ್ರಭುಸೆಟ್ಟಿಯೆಂಬ ಭಕ್ತನು ಅಂದಿನ ಸಂಜೆಯ ಶಿವಪೂಜೆ ತನ್ನ ಗೃಹಕ್ಕೆ ದಯಮಾಡಿಸುವಂತೆ ಲೋಕಪಾವನ ಕಾರಣವತಾರಿಗಳಾದ ಶಿವಯೋಗಿಗಳನ್ನು ಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಅವನ ಪ್ರಾರ್ಥನೆಯನ್ನಂಗೀಕರಿಸಿ ಶಿವಯೋಗಿಗಳು ಶಿಷ್ಯರೊಡನೆ ಪ್ರಭುಸೆಟ್ಟಿಯ ಮನೆಗೆ ಹೊರಟುಬರುತ್ತಿದ್ದಾರೆ. ಬಸವೇಶ್ವರ ದೇವಾಲಯದಲ್ಲಿ ಮೂರ್ತಗೊಂಡಿದ್ದಾಗ ಭಕ್ತರ ನೂಕುನುಗ್ಗಲಿನಲ್ಲಿ ದರ್ಶನ ಪಡೆಯಲಾಗದ ಪಟ್ಟಣದ ಹೆಂಗಳೆಯರು ತಮ್ಮ ತಮ್ಮ ಮನೆಯ ಉಪ್ಪರಿಗೆ ಮೇಲೆ ನಿಂತು ಭಕ್ತಿಯಿಂದ ದರ್ಶನಕ್ಕಾಗಿ ಗುಂಪು ಗುಂಪಾಗಿ ನಿಂತಿದ್ದಾರೆ. ಆದರೆ ಕಾಷಾಯವಸ್ತ್ರಧಾರಿಗಳಾದ ವಿರತರ ಷಟ್‌ಸ್ಥಲ ಬ್ರಹ್ಮಿಗಳ ಗುಂಪಿನಲ್ಲಿ ಗುರುಗಳಾದ ಶಿವಯೋಗಿಗಳಾರು ಇತರಾರೆಂಬುದು ಹೊಸದಾಗಿ ನೋಡುತ್ತಿರುವ ಆ ಹೆಂಗಳೆಯರಿಗೆ ಗೊತ್ತಾಗಲಿಲ್ಲ. ಆದರೆ ಆ ನಾರಿಯರ ಗುಂಪಿನಲ್ಲಿ ಎಲ್ಲರ ಪರಿಚಯವುಳ್ಳ (ಬಹುಷಃ ಆಕೆ ಹಿಂದಣ ಊರಾದ ಗೂಳೂರಿನವಳಿರಬಹುದು) ಒಬ್ಬಾಕೆಯಿದ್ದಳು. ಹಿರಿಯಳಾದ ಆಕೆಯು ಒಬ್ಬೊಬ್ಬರನ್ನೂ ತನ್ನ ಸ್ನೇಹಿತೆಯರಿಗೆ ಪರಿಚಯಮಾಡಿ ಕೊಡುತ್ತಾಳೆ. ಈ ಪರಿಚಯದ ಭಾಗವಂತೂ ಸರಸಸಂಭಾಷಣಾರೂಪವೂ ಕಾವ್ಯಮಯವೂ ಆಗಿದೆ. ಜೊತೆಯಲ್ಲಿದ್ದ ವಿರತರಪೈಕಿ ೧೭ ಮಂದಿ ವಿರತರನ್ನು ವರ್ಣಿಸಿ ಪರಿಚಯಿಸುತ್ತಾಳೆ. ಸಪ್ಪೆಯಾರ್ಯ, ಬೋಳಬಸವ, ಹುಪ್ಪಿನಹಳ್ಳಿ ಅಯ್ಯ, ರಾಚೋಟಯ್ಯ, ಗುಮ್ಮಾಳಾಪುರದ ಸಿದ್ಧಲಿಂಗ, ಪಟ್ಟಣದ ದೇವ, ಚಂದ್ರಶೇಖರ, ದೊಡ್ಡಸಿದ್ಧೇಶ, ಶೀಲವಂತೇಶ್ವರ, ಗಟ್ಟಿಸಿದ್ಧಯ್ಯ, ಸುತ್ತೂರ ಸಿದ್ಧಮಲ್ಲೇಶ, ಘನಲಿಂಗಿದೇವ, ಮೇಲೂರಪುರದ ಬತ್ತಲೆಯದೇಶಿಕ, ಹುಚ್ಚಪರ್ವತದೇವ, ಚಿಟ್ಟಿಗದೇವ, ಕಟ್ಟೆಯಪುರದ ನಂಜದೇಶಿಕೇಂದ್ರ, ತಿಪ್ಪೂರ ಕಂಕಣದೇವ – ಇವರೇ ಆ ಹದಿನೇಳು ಮಂದಿ. ಕೊನೆಯದಾಗಿ ಆವಿರತರ ಮಧ್ಯದಲ್ಲಿರುವ ಶುದ್ಧಸ್ಫಟಿಕದ ಪ್ರಕಾಶದಂತೆ ಹೊಳೆಯುವ ಸಚ್ಚಿದಾನಂದ ಸ್ವರೂಪನಾದ ಸಿದ್ಧಲಿಂಗ ಶಿವಯೋಗಿಗಳನ್ನು ಕಾಣಿಸುತ್ತಾಳೆ. ಜಗದ ಸಕಲ ಜೀವಿಗಳ ಮನದ ಚಿಂತೆಯ ಬಿಡಿಸಿ ನಿಶ್ಚಲ ಸುಖವನೀವ ಶಿವಯೋಗಿಗಳನ್ನು ಕಂಡು ಮನದಣಿಯೆ ಸಂತೋಷಪಡುತ್ತಾರೆ. ಜನರೆಲ್ಲಾ ಕೊಂಡಾಡಿ ಕುಣಿಯುತ್ತಾ ಸಂಭ್ರಮದಿಂದ ಪ್ರಭುಸೆಟ್ಟಿಯ ಮನೆಗೆ ಸ್ವಾಮಿಯನ್ನು ಬಿಜಯಂಗೈಸುತ್ತಾರೆ. ಶಿವಯೋಗಿಯನ್ನು ಮೂರ್ತಗೊಳಿಸುವುದಕ್ಕಾಗಿಯೇ ಸಿದ್ಧಗೊಂಡು ಹಸಿರು ಮೇಲ್ ಹೊದಿಕೆ ತೋರಣಗಳಿಂದಲೂ ನಾನಾವಿಧ ಪುಷ್ಪಮಾಲೆ ಗುಚ್ಛಗಳಿಂದಲೂ ಹೊಂಬಾಳೆ ಬಾಳೆಕಂದುಕಗಳಿಂದಲೂ ಅಲಂಕೃತವಾದ ಮಂಟಪಕ್ಕೆ ಕರೆತಂದು ಮಧ್ಯದಲ್ಲಿನ ನವರತ್ನ ಖಚಿತ ಸಿಂಹಾಸನದಲ್ಲಿ ಮೂರ್ತಗೊಳಿಸುತ್ತಾನೆ ಪ್ರಭುಸೆಟ್ಟಿ ಮತ್ತು ತಾನೇ ಪೂಜಾಸ್ಥಳವನ್ನು ಸಾರಣೆಕಾರಣೆಮಾಡಿ ರಂಗವಲ್ಲಿಯಬಿಡಿಸಿ ಪೃಥಿವಿಯ ಪೂರ್ವಾಶ್ರಯವ







ಕಳೆದು, ಕಸ್ತೂರಿ ಪರಿಮಳದ ಚಳಯವಿತ್ತು, ಮೃದುವಾದ ಒರಗನಿಕ್ಕಿ, ಮುಂದೆ ಮಣೆಯನಿಟ್ಟು, ಬಂಗಾರದ ಕಳಸಗಳಲ್ಲಿ ನಿರ್ಮಲೋದಕವನ್ನು ತುಂಬಿ ಮುಂದಿರಿಸಿ, ಗಂಧಾಕ್ಷತೆ ಪಾತ್ರೆಗಳನ್ನು ಮುಂದಿಟ್ಟು, ಪರಿಮಳಯುಕ್ತವಾದ ಪರಿಪರಿಯ ಹೊಸ ಹೂಗಳನ್ನು ಶೋಧಿಸಿ ಸೋಸಿ ಬಟ್ಟಲಲ್ಲಿಟ್ಟು, ಧೂಪ ಧೂಮಗಳನ್ನು ಬೀಸಿ ಇಕ್ಕೆಲಗಳಲ್ಲಿ ದೀಪಗಳನ್ನು ಬೆಳಗಿಸಿ – ಹೀಗೆ ಪೂಜೆಗೆ ಅಣಿಮಾಡಿ ಗುರುಪಾದಕ್ಕೆ ಶರಣಾರ್ಥಿ ಹಾಕಿ ಲಿಂಗಾರ್ಚನೆಗೆ ಬಿಜಯಂಗೈಯ್ಯುವುದು ಎಂದು ಬಿನ್ನವಿಸಿಕೊಂಡನು. ಅದರಂತೆ ಶಿವಯೋಗಿಗಳು ಶಿಷ್ಯರೊಡನೆ ಲಿಂಗಾರ್ಚನೆಯನ್ನು ಮಾಡುತ್ತಾರೆ. ಅತ್ತ ಎಲ್ಲ ವಿರತರೂ ಕೂಡಿ ಲಿಂಗಾರ್ಚನೆಯ ಕೊನೆಯಲ್ಲಿ ಸಿದ್ಧಪತಿಗೆ ನೈವೇದ್ಯಕೊಟ್ಟು, ತಾಂಬೂಲ ನೀಡಿ, ನೀರಾಜನವೆತ್ತಿ ಬೆಳಗಿ ಪುಷ್ಪಾಂಜಲಿಯನ್ನು ಅರ್ಪಿಸಿ ದಂಡಪ್ರಣಾಮಗೈಯ್ಯುತ್ತಿರಲು ಅವರಲ್ಲಿ ಒಬ್ಬ ವಿರತನಿಗೆ ವಿಚಿತ್ರವಾದ ಆಸೆಯುಂಟಾಗುತ್ತದೆ. ಅದೆಂದರೆ ತುಂಬೆ ಹೂಗಳಿಂದ ಇಷ್ಟಲಿಂಗವನ್ನು ಪೂಜಿಸಬೇಕೆಂಬುದೇ ಆ ಆಸೆ. ಈಗ ನಾನು ಇಷ್ಟಲಿಂಗವನ್ನು ದ್ರೋಣ ಪುಷ್ಪರಾಶಿಯಿಂದ ಅರ್ಚಿಸದ ಹೊರತು ಪ್ರಸಾದವನ್ನು ಸ್ವೀಕರಿಸಲಾರೆನು ಇದು ನನ್ನ ನೇಮ ಎಂದು ಹಠಹಿಡಿಯುತ್ತಾನೆ. ಆಗ ಪೂಜಾಮಗ್ನರಾಗಿದ್ದ ಶಿವಯೋಗಿಗಳು ಒಮ್ಮೆ ಕರುಣಾದೃಷ್ಟಿಯಿಂದ ಆ ವಿರತನನ್ನು ನೋಡಿ ಅಕಾಲದಲ್ಲಿ ದ್ರೋಣ ಪುಷ್ಪವೃಷ್ಟಿಯನ್ನು ಕರೆಯುತ್ತಾನೆ. ಆಗ ಸಂತೋಷದಿಂದ ಆ ವಿರತನು ಲಿಂಗಾರ್ಚನೆಗೈದು ಎಲ್ಲರೊಡನೆ ಸುಪ್ರಸಾದವನ್ನು ಸ್ವೀಕರಿಸುತ್ತಾನೆ. ಎಲ್ಲರೂ ಆಶ್ಚರ್ಯಚಕಿತರಾಗಿ ಸಿದ್ಧಲಿಂಗೇಶ್ವರರನ್ನು ಹೊಗಳುತ್ತಾರೆ. ಹಿಂದೆ ಇಳೆಯೊಳಗೆ ಬರಲು ಕೋಟೆಯ ಶಿವಯ್ಯನೆಂಬ ಭಕ್ತನು ನೈವೇದ್ಯಕ್ಕೆ ಧಾನ್ಯವಿಲ್ಲವೆಂದು ಚಿಂತಿಸುತ್ತಿರುವಾಗ ಶಿವನು ಧಾನ್ಯದ ಮಳೆಗರದಂತೆ, ಕರಿಕಾಲಚೋಳರಾಜನಿಗೆ ಹೊನ್ನಿನ ಮಳೆಯನ್ನು ಕರೆದಂತೆ ಶಿವಯೋಗಿಗಳು ಇದೀಗ ತುಂಬೆಹೂವಿನ ಮಳೆಕರೆದದ್ದು ಅದ್ಭುತವಾಯಿತೆಂದು ಹೊಗಳುತ್ತಿದ್ದರು. ಅಷ್ಟುಹೊತ್ತಿಗೆ ರಾತ್ರಿಯ ಮೊದಲ ಯಾಮ ಕಳೆಯಲು ಶಿವಯೋಗಿ ಮೊದಲುಗೊಂಡು ಎಲ್ಲರೂ ಶಿವಯೋಗ ನಿದ್ರೆಯಲ್ಲಿ ಮುಳುಗುತ್ತಾರೆ. ನಿಶೆಯು ಚತುರ್ಥಪಾದಕ್ಕೆ ಕಾಲಿಡಲು ಉಷೆಯು ಹುಟ್ಟುತ್ತಾಳೆ. ಶಿವಭಕ್ತ ಸಂಗೀತಗಾರರು ತಾಳದಂಡಿಗೆ ವೀಣೆ ಹಿಡಿದು ಸಪ್ತಸ್ವರಗಳ ಮಿಡಿದು ಧನ್ಯಾಸಿ ಭೂಪಾಳಿ ಮೊದಲಾದ ರಾಗಗಳನ್ನು ಹಿಡಿದು

*''ಏಳು ಗಿರಿರಾಜಪುತ್ರೀ ಮುಖಾಂಬುಜ ಹಂಸ ।*
*ಏಳು ಮುಗ್ಧರ ಭಕ್ತಿನಿಷ್ಠಾವಿಲಾಸಿ*
*ಈರೇಳು ಲೋಕಕಧೀಶ ಏಳುಮುನಿಜನ ಹೃದಯವಾಸ ಸುಜ್ಞಾನವೇಷಾ''*

ಎಂದು ಶಿವಯೋಗಿಯನ್ನು ಉಪ್ಪವಡಿಸಿದರು. ಮುಂತಾಗಿ ಸುಪ್ರಭಾತವನ್ನು ಹಾಡಿ ಶಿವಯೋಗಿಯನ್ನು ಉಪ್ಪವಡಿಸಿದರು. ಈ ಮಂಗಳಗೀತೆಯನ್ನಾಲಿಸಿದ ವಿರತಾಗ್ರಣಿಯಾದ ಶಿವಯೋಗಿಗಳು ಉಪ್ಪವಡಿಸಿ ಆ ಪ್ರಭುಸೆಟ್ಟಿಯ ಮನೆಯಲ್ಲಿ ಲಿಂಗಾರ್ಚನೆ ಶಿವಾನಂದದಲ್ಲಿ ಮುಳುಗುತ್ತಾಳೆ.

ಇತ್ತ ಅಂದು ಪ್ರಾತಃಕಾಲ ಗೋಣಿಗರಜಾತಿಯ ಸೊಸೆಯೊಬ್ಬಳು ಅತ್ತೆಯ ಆಜ್ಞೆಯಂತೆ ನೀರನ್ನು ತರಲು ಈ ಊರಿನ ಕೆರೆಗೆ ಕೊಡದೊಡನೆ ಊರಿನ ಹೆಂಗಸರೊಡನೆ ಹೋಗುತ್ತಾಳೆ. ನೀರಿನಲ್ಲಿ ಅಲೆಯಿಲ್ಲದುದರಿಂದ ದಡದಲ್ಲಿ ನಿಂತು ನೀರಿನ ಮೇಲೆ ಕೊಡವನ್ನು ಇರಿಸಿ ಇತ್ತ ಕೈಕಾಲು ತೊಳೆದುಕೊಳ್ಳಲು ಸುರುವುಮಾಡುತ್ತಾಳೆ. ಅತ್ತ ಅಷ್ಟು ಹೊತ್ತಿಗೆ ಎತ್ತಲಿಂದಲೋ ಗಾಳಿ ಬೀಸಿದುದರಿಂದ ಕೊಡವು ಕೆರೆಯನಡುಭಾಗಕ್ಕೆ ತೇಲಿಹೋಗುತ್ತದೆ. ಅತ್ತೆಮಾವಂದಿರು ಬೈಯ್ಯುವರೆಂಬುದಾಗಿ ಭಯಪಡುತ್ತಾಳೆ ಆ ಸೊಸೆಹೆಣ್ಣು. ಆಗ ಜೊತೆಯಲ್ಲಿದ್ದ ಮತ್ತೊಬ್ಬಳಾಕೆ 'ಹೇ ಸ್ನೇಹಿತೆ' ಏಕೆ ಚಿಂತಿಸುವೆ? ದುಃಖಿಸುವೆ? ಎಲ್ಲರಿಗೂ ಒಂದೊಂದು ಸಾರಿ ಎಡವಟ್ಟಾಗುವುದು ಸಹಜ. ಸೊಸೆಗೆ ಇಂತಹುದೇ ಒಂದು ಕಷ್ಟಬಂದಿತ್ತು. ಒಮ್ಮೆ ನೆಲ್ಲುಕುದಿಸುವಾಗ ಮಡಕೆ ಒಡೆದು ಇಬ್ಭಾಗವಾಯಿತು. ಅದರಿಂದ ಅತ್ತೆ ಬಯ್ಯುವಳೆಂಬುದಾಗಿ ಹೆದರಿದಳು. ಏನು ಮಾಡುವುದೆಂದು ತೋಚದೆ 'ಸಿದ್ಧೇಶನಾಣೆ' ಎಂದು ಆಣೆಮಾಡಿದಳು. ಕೂಡಲೇ ಇಬ್ಭಾಗವಾದ ಮಡಕೆ ಮೊದಲಹಾಗೆ ಕೂಡಿಕೊಂಡಿತು ಅದರಂತೆ ನೀನೂ ಕೂಡ ಸಿದ್ಧೇಶನ ಮೇಲೆ ಆಣೆಯಿಡು ಎನ್ನುತ್ತಾಳೆ. ಅದರಂತೆ ಆಕೆ 'ಎಲೈ ಕೊಡವೆ! ನೀನು ಈಗ ದಡಕ್ಕೆ ಬಾರದಿರೆ ಸಿದ್ಧೇಶನಾಣೆ' ಎನ್ನುತ್ತಾಳೆ. ತಕ್ಷಣದಲ್ಲಿಯೆ ಕೊಡವು ತೇಲಿಕೊಂಡು ದಡಕ್ಕೆ ಬರುತ್ತದೆ. ನೀರನ್ನು ತುಂಬಿಕೊಂಡು ಎತ್ತಲು ಅಲುಗಾಡದೆ ನಿಲ್ಲುತ್ತದೆ. ಮತ್ತೊಮ್ಮೆ 'ಸಿದ್ಧೇಶನಾಣೆ' ಎನ್ನುತ್ತಾಳೆ. ಕೂಡಲೆ ಅದು ಮೇಲೆ ಬರುತ್ತದೆ. ಆ ಕೊಡವನ್ನು ನೆತ್ತಿಯಲ್ಲಿ ಹೊತ್ತು ಆ ನಾರಿ ಪ್ರಭುಸೆಟ್ಟಿಯ ಮನೆಯಲ್ಲಿ ಮೂರ್ತಗೊಂಡಿದ್ದ ಸಿದ್ಧೇಶನ ಸನ್ನಿಧಾನಕ್ಕೆ ಬಂದು ನಡೆದ ಸಂಗತಿಯನ್ನು ನಿವೇದಿಸುತ್ತಾಳೆ. ಶಿವಯೋಗಿಯ ಆಶೀರ್ವಾದವನ್ನು ಪಡೆದು ಮನೆಗೆ ತೆರಳಿ ತನ್ನ ಅತ್ತೆ ಮಾವಂದಿರಿಗೆ ನಡೆದುದೆಲ್ಲವನ್ನೂ ತಿಳಿಸುತ್ತಾಳೆ. ಅವರೆಲ್ಲರೂ ಆಶ್ಚರ್ಯ ಸಂತೋಷಗಳನ್ನು ವ್ಯಕ್ತಪಡಿಸಿ ''ಆಣೆ''ಯ ಮಹಿಮೆಯನ್ನು ಕೊಂಡಾಡುತ್ತಾರೆ.

### *ವಿಶೇಷ ವಿಚಾರ*

೧. ಶ್ರೀ ಸಿದ್ಧಲಿಂಗೇಶ್ವರರು ೧೦೧ ಜನ ವಿರತರೊಡನೆ ದೇಶಸಂಚಾರಗೈದರೆಂಬ ಪ್ರತೀತಿಯಿದ್ದರೂ ೧೭ ಮಂದಿ ವಿರತರ ಹೆಸರು ಮತ್ತು ವರ್ಣನೆಯನ್ನು ಕೊಟ್ಟಿದ್ದಾರೆ.

೨. ಸು. ೧೫೬೦ರ ಹೊತ್ತಿಗೆ ಈ ಊರಿಗೆ 'ಟುಮಕಿ' ಇತ್ಯಾದಿ ಹಳೆಯ ಹೆಸರುಗಳು ಹಿಂದೆ ಬಿದ್ದು 'ತುಮಕೂರು' ಎಂಬ ಹೆಸರು ಪ್ರಚಲಿತವಿತ್ತೆಂಬುದಾಗಿ ಸಂಧಿ ೧೫ರ ೨ನೇ ಪದ್ಯದಿಂದ ತಿಳಿದು ಬರುತ್ತದೆ.

೩. 'ಸುಪ್ರಭಾತ' ಎಂಬ ಸಾಹಿತ್ಯ ಪ್ರಕಾರ ಕಳೆದ ೨-೩ ದಶಕದಿಂದ ಪ್ರಚಲಿತವಾಗಿ ಪ್ರಸಿದ್ಧವಾಗಿದೆ. ಆದರೆ ಅದು ಬಹಳ ಹಿಂದೆಯೇ ಶ್ರೀ ಸಿದ್ಧೇಶ್ವರ ಪುರಾಣದಲ್ಲಿ ಕಂಡುಬರುತ್ತದೆ. ಪುರಾಣದ ೧೫ನೆಯ ಸಂಧಿಯಲ್ಲಿ ಕವಿವಿರಕ್ತ ತೋಂಟದಾರ್ಯರು ಮನೋಜ್ಞವಾದ ಸುಪ್ರಭಾತವನ್ನು ರಚಿಸಿದ್ದಾರೆ. ನೋಡಿ ಆನಂದಿಸಿರಿ : ಪದ್ಯ ೬೭ ರಿಂದ ೬೯.

೪. ವೀರಶೈವರಲ್ಲಿ ''ಶಿವನಾಣೆ'' ಮಾಡುವುದು ಹಿಂದಿನಿಂದಲೂ ಹೇಗೆ ರೂಢಿಗೆ ಬಂದಿದೆಯೋ ಅದರಂತೆ ತುಮಕೂರು ಸೀಮೆಯಲ್ಲಿ ''ಸಿದ್ಧೇಶನಾಣೆ'' ಮಾಡುವುದು ಶ್ರೀ ಸಿದ್ಧಲಿಂಗೇಶ್ವರರ ಕಾಲದಿಂದಲೂ ರೂಢಿಗೆ ಬಂದಿರುತ್ತದೆ. ಇದರ ಪ್ರತಿರೂಪವೆಂಬಂತೆ ಶ್ರೀಮಠದಲ್ಲಿ ಇಂದಿಗೂ ''ಸ್ವಾಮಿಗಳ ಪಾದದಾಣೆ'' ಮಾಡುವುದನ್ನು ಕಾಣಬಹುದಾಗಿದೆ. ★

## "ಶಿಕ್ಷಣದಿಂದ ಮಾತ್ರ ಸಮಾನತೆ" ಸಚಿವ ರಾಮಲಿಂಗರೆಡ್ಡಿ

ತುಮಕೂರು. ದಿನಾಂಕ ೩೦.೭.೦೫ ರಂದು ಶ್ರೀ ಸಿದ್ಧಗಂಗಾ ಮಠದ ಸನಿವಾಸ ವಿದ್ಯಾ ಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆ ಮಾಡಿ, ಮಾತನಾಡುತ್ತಾ ಶಿಕ್ಷಣದಿಂದ ಮಾತ್ರ ಸಮಾಜದಲ್ಲಿ ಸಮಾನತೆ ತರಲು ಸಾಧ್ಯ. ಕರ್ನಾಟಕದಲ್ಲಿ ಮಠಗಳು ಸರ್ಕಾರ ಮಾಡಬೇಕಾಗಿರುವ ಕೆಲಸಗಳನ್ನು ಅವು ಚೆನ್ನಾಗಿ ನಿರ್ವಹಿಸುತ್ತಿವೆ. ಅವುಗಳಲ್ಲಿ ಶ್ರೀ ಸಿದ್ಧಗಂಗಾ ಮಠ ಜಾತಿ-ಮತ-ಭೇದವೆಣಿಸದೆ ಸಾವಿರಾರು ಮಕ್ಕಳಿಗೆ ಅನ್ನ, ವಿದ್ಯೆಯನ್ನು ನೀಡುತ್ತಿರುವುದು ತುಂಬಾ ಪ್ರಸಂಸನೀಯ. ಎಲ್ಲರಿಗೂ ಶಿಕ್ಷಣ ಸಿಗಬೇಕೆಂಬುದೇ ಸರ್ಕಾರದ ಧ್ಯೇಯ. ಅದಕ್ಕಾಗಿ ಕೋಟ್ಯಾಂತರ ರೂಪಾಯಿ ಖರ್ಚುಮಾಡುತ್ತಿದೆ. ಅನುದಾನ ವಿದ್ಯಾ ಸಂಸ್ಥೆಗಳಲ್ಲಿ ಖಾಲಿ ಹುದ್ದೆಗಳಿಗೆ ನೇಮಕಾತಿಗೆ ಅವಕಾಶ ಕಲ್ಪಿಸಿದ್ದೇವೆ. ಸರ್ವ ಶಿಕ್ಷಣ ಅಭಿಯಾನದಡಿ ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಒತ್ತು ನೀಡಿದ್ದೇವೆ. ಹದಿಮೂರು ಸಾವಿರ ಕೊಠಡಿಗಳ ನಿರ್ಮಾಣ ಕಾರ್ಯ ನಡೆಯುತ್ತಿದೆ. ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಜೊತೆಗೆ ಉತ್ತಮ ಸಂಸ್ಕಾರ ಬೆಳಸಿಕೊಳ್ಳಬೇಕು ಎಂದು ಕರೆ ನೀಡಿದರು.

ದಿವ್ಯ ಸಾನಿಧ್ಯವಹಿಸಿದ್ದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ ಇಂಥಾ ಸಂಘಗಳು ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಹೊರ ಚೆಲ್ಲಲು ಸಹಾಯವಾಗುತ್ತವೆ. ಗ್ರಾಮಾಂತರ ಪ್ರದೇಶದಲ್ಲಿ ಶಿಕ್ಷಣದಲ್ಲಿ ಪ್ರಗತಿ ಸಾಧಿಸಲು ಎಲ್ಲರೂ ಶ್ರಮಿಸಬೇಕು. ವಿದ್ಯಾರ್ಥಿಗಳು ಜ್ಞಾನವಂತರಾಗಿ ಉತ್ತಮ ಶಿಕ್ಷಣ ಪಡೆಯಬೇಕು. ಸರ್ಕಾರವು ಅನೇಕ ರೀತಿಯ ನೆರವು ನೀಡುತ್ತಿದೆ. ಅದನ್ನು ಸದ್ವಿನಿಯೋಗ ಮಾಡಿಕೊಳ್ಳಬೇಕು. ಶಿಕ್ಷಕರು ಒಳ್ಳೆಯ ಜ್ಞಾನಸಂಪನ್ನರಾಗಬೇಕು, ಆಚಾರವಂತರಾಗಬೇಕು ಎಂದು ಆಶೀರ್ವದಿಸಿದರು.

ತುಮಕೂರಿನ ಶಾಸಕರಾದ ಶ್ರೀ ಎಸ್. ಶಿವಣ್ಣನವರು ಅಧ್ಯಕ್ಷತೆ ವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ತುಮಕೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಶ್ರೀ ಓ. ಅನಂತರಾಮಯ್ಯ ಅವರು ಮಾತನಾಡಿ, ವಿದ್ಯಾರ್ಥಿಗಳು ಜೀವನದಲ್ಲಿ ಶಿಸ್ತು ಬೆಳಸಿಕೊಳ್ಳಬೇಕು. ಈ ಜಾಗತಿಕ ಪ್ರಪಂಚದಲ್ಲಿ ಪ್ರತಿಭೆಗೆ ಮಾತ್ರ ಮನ್ನಣೆ ಇದೆ ಎಂದರು.

ಮೇಲ್ಮನೆ ಸದಸ್ಯರಾದ ಶ್ರೀ ಹೆಚ್. ಎಸ್. ಶಿವಶಂಕರ್ ರವರು ಮಾತನಾಡುತ್ತಾ ಶಿಕ್ಷಣದಿಂದ ಮಾತ್ರ ಆರ್ಥಿಕ ದೃಢತೆ ಸಾಧ್ಯ ಈ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಸುಧಾರಣೆ ಮಾಡಿದೆ. ಶಿಕ್ಷಕರ, ಮಕ್ಕಳ ಹಿತವನ್ನು ಕಾಪಾಡಬೇಕು. ಅನುದಾನಿತ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಜೀವವಿಮಾ ಸೌಲಭ್ಯ ಕಲ್ಪಿಸುವಂತಾಗಬೇಕು ಎಂದರು

ಮಾಜಿಲೋಕ ಸಭಾ ಸದಸ್ಯರಾದ ಶ್ರೀ ಜಿ.ಎಸ್. ಬಸವರಾಜು ಭಾಗವಹಿಸಿ ಮಹಾತ್ಮರ ಜೀವನಾದರ್ಶಗಳನ್ನು ವಿದ್ಯಾರ್ಥಿಗಳು ಪಾಲಿಸಬೇಕೆಂದರು. ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು.

ವಿದ್ಯಾರ್ಥಿಗಳು ಸಾಮೂಹಿಕ ಪ್ರಾರ್ಥನೆ ಸಲ್ಲಿಸಿದರು ಶ್ರೀ ಗವಿ ಸಿದ್ಧಯ್ಯನವರು ಸ್ವಾಗತಿಸಿದರು. ಶ್ರೀ ಎಂ. ಮಹದೇವಯ್ಯ, ಶ್ರೀ ಜಿ. ಆರ್. ಶಂಕರಪ್ಪನವರು ಅತಿಥಿ ಪರಿಚಯ ಮಾಡಿದರು. ಶ್ರೀ ಕೆ. ಹೆಚ್. ಶಿವರುದ್ರಯ್ಯನವರು ವಂದಿಸಿದರು. ಶ್ರೀ ಡಿ.ಎಸ್. ನಾಗರಾಜು ಕಾರ್ಯಕ್ರಮ ನಿರೂಪಿಸಿದರು.

ದಿನಾಂಕ ೨೩-೭-೦೫ರಂದು ಕರ್ನಾಟಕ ರಾಜ್ಯದ ರಾಜ್ಯಪಾಲರಾದ ಘನತೆವೆತ್ತ ಸನ್ಮಾನ್ಯ ಶ್ರೀ ಟಿ.ಎನ್. ಚತುರ್ವೇದಿಯವರು ಸಿದ್ಧಗಂಗಾಮಠಕ್ಕೆ ಭೇಟಿನೀಡಿ ಪೂಜ್ಯ ಶ್ರೀ ಶ್ರೀಗಳವರ ದರ್ಶನಾಶೀರ್ವಾದ ಪಡೆದರು.

ನಂತರ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಿ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುತ್ತಾ, ಪ್ರಾರ್ಥನೆ ಭಗವಂತನ ಸಾಕ್ಷಾತ್ಕಾರಕ್ಕೆ ಇರುವ ಸುಲಭಮಾರ್ಗ, ಇದರಿಂದ ನಮ್ಮ ಕ್ಲೇಶಗಳನ್ನು ದೂರಮಾಡಬಹುದು. ಗಾಂಧೀಜಿಯವರಾಗಲಿ, ಬಸವಣ್ಣನವರಾಗಲಿ ಪ್ರಾರ್ಥನೆಗೆ ಹೆಚ್ಚು ಮಹತ್ವ ನೀಡಿದ್ದರು. ಆ ಕಾರಣ ಅವರು ಜೀವನದಲ್ಲಿ ಬಂದ ಕಷ್ಟಗಳನ್ನು ಸುಲಭವಾಗಿ ಪರಿಹರಿಸಿಕೊಂಡರು. ಗಾಂಧೀಜಿ ಭಗವದ್ಗೀತೆಯನ್ನು ತಮ್ಮ ತಾಯಿಯಂತೆ ಭಾವಿಸಿದ್ದರು. ನೀವು ಪೂಜ್ಯರ ಸಾನಿಧ್ಯದಲ್ಲಿ ನಡೆಸುವ ಈ ಪ್ರಾರ್ಥನೆ ನಿಮಗೆ ಮುಂದೆ ಫಲ ನೀಡುತ್ತದೆ. ಜಗತ್ತಿಗೆ ನೀತಿ, ಧರ್ಮ, ತತ್ವವನ್ನು ಭೋಧಿಸುವ ಸಾಮರ್ಥ್ಯ ಭರತಖಂಡಕ್ಕಿದೆ ಇದು ಯೋಗ್ಯ ಭೂಮಿ, ಇಲ್ಲಿ ಅನೇಕ ಮಹಾಪುರುಷರು ಜನ್ಮತಳೆದು ಜಗತ್ತಿಗೆ ಬೆಳಕು ನೀಡಿದ್ದಾರೆ. ಪೂಜ್ಯ ಸ್ವಾಮಿಜಿಯವರನ್ನು ಯಾವುದಾದರು ಸಮಾರಂಭಗಳಲ್ಲಿ ಹದಿನೈದು ದಿನಕ್ಕೊಮ್ಮೆ ಭೇಟಿಯಾಗುತ್ತಿದ್ದೆ ಈಗ ಎರಡು ತಿಂಗಳಿಂದ ಭೇಟಿಯಾಗಿರಲಿಲ್ಲ ಅದಕ್ಕಾಗಿ ಬಂದಿದ್ದೇನೆ. ಅವರ ಸೇವೆ ಅನುಪಮ ನೀವೆಲ್ಲ ಧನ್ಯರು ಎಂದು ಪ್ರಶಂಸಿದರು. ಡಾ. ಎಂ.ಎನ್. ಚೆನ್ನಬಸಪ್ಪನವರು ಸ್ವಾಗತಿಸಿದರು ಡಿ.ಎಸ್. ನಾಗರಾಜು ವಂದಿಸಿದರು. ಪೂಜ್ಯರು ರಾಜ್ಯಪಾಲರನ್ನು ಶಾಲು ಹೊದಿಸಿ ಫಲಪುಷ್ಪ ನೀಡಿ ಸನ್ಮಾನಿಸಿದರು.

ದಿನಾಂಕ ೩೧.೭.೦೫ ರಂದು ಭಾನುವಾರ ತುಮಕೂರು ತಾಲ್ಲೂಕಿನ ಸಿದ್ಧಗಂಗಾ ಮಠದ ಪ್ರೌಢಶಾಲಾ ಹಾಗೂ ಮಾಧ್ಯಮಿಕ ಶಾಲಾ ಉಪಾಧ್ಯಾಯರಿಗೆ "ಮಾನವ ಸಂಪನ್ಮೂಲ ಅಭಿವೃದ್ಧಿಯ ಬಗ್ಗೆ ತಜ್ಞರಾದ ಮಾನ್ಯ ಶ್ರೀ ಅನಂತ ರಾಮಯ್ಯನವರು ಉಪನ್ಯಾಸ ನೀಡಿದರು. ಸಮಾಜದಲ್ಲಿ ವ್ಯಕ್ತಿ ವ್ಯಕ್ತಿಗಳ ಸಂಬಂಧ, ವಿದ್ಯಾರ್ಥಿಗಳೊಡನೆ ಪ್ರೀತಿ ವಿಶ್ವಾಸ ಬೆಳಸಿಕೊಳ್ಳುವ ಬಗ್ಗೆ, ವ್ಯಕ್ತಿತ್ವವನ್ನು ಬೆಳಸಿಕೊಳ್ಳಿಸುವ ವಿಚಾರವಾಗಿ ಮಾತನಾಡಿದರು, ಶ್ರೀ ಬಸವರಾಜು ಅವರು ಜೊತೆಯಲ್ಲಿ ಆಗಮಿಸಿದ್ದರು, ಪ್ರಾರಂಭದಲ್ಲಿ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಜ್ಯೋತಿ ಬೆಳಗಿಸುವುದರ ಮುಖೇನ ಉದ್ಘಾಟಿಸಿ ಆಶೀರ್ವಚನ ನೀಡಿದರು, ವಿದ್ಯಾಧಿಕಾರಿಗಳಾದ ಮಾನ್ಯ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ಭಾಗವಹಿಸಿದ್ದರು.

ದಿನಾಂಕ ೪.೮.೦೫ ರ ಗುರುವಾರದಂದು ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಪದ್ಮ ವಿಭೂಷಣ ಲಿಂ|| ಡಾ. ಮಲ್ಲಿಕಾರ್ಜುನ ಮನ್ಸೂರರ ಸುಪುತ್ರರಾದ ಪಂಡಿತ ರಾಜಶೇಖರ ಮನ್ಸೂರರು ಆಗಮಿಸಿ ಸಂಜೆ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಿದ್ದರು ನಂತರ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುತ್ತಾ, ಸಂಗೀತ ವಿಶೇಷ ಶಕ್ತಿಯಿಂದ ಕೂಡಿದೆ. ಈ ಜಗತ್ತೆಲ್ಲಾ ನಾದಮಯವಾಗಿದೆ. ನಿಮ್ಮ ಪ್ರಾರ್ಥನೆಯು ಸಂಗೀತದಲ್ಲಿ ನಡೆದದ್ದನ್ನು ಕೇಳಿ ಮನಸ್ಸಿಗೆ ಆನಂದವಾಗಿದೆ ನಿಮಗೆ ಸಿಕ್ಕಿರುವ ಭಾಗ್ಯ ನನಗೆ ಎಳೆವೆಯಲ್ಲಿ ಸಿಕ್ಕಲಿಲ್ಲ, ಪೂಜ್ಯ ಸ್ವಾಮೀಜಿಯವರ ಆತ್ಮ ಜ್ಯೋತಿಯ ಬೆಳಗಿನಲ್ಲಿ ನೀವೆಲ್ಲ ಬೆಳಗುತ್ತಿದ್ದೀರಿ. ಒಳ್ಳೆಯ ಸಂಸ್ಕಾರ ನಿಮಗೆ ಇಲ್ಲಿ ಸಿಗುತ್ತಿದೆ. ಇದನ್ನು ಮುಂದೆ ಜೀವದಲ್ಲಿ ಬೆಳಸಿಕೊಳ್ಳಬೇಕು, ಸಂಗೀತಕ್ಕೆ ಜಗತ್ತನ್ನೆ ಒಂದು ಗೂಡಿಸುವ ಶಕ್ತಿ ಇದೆ. ಇದಕ್ಕೆ ತಲೆದೂಗದ ಮಾನವರೇ ಇಲ್ಲಾ ಎಂದು ಅಕ್ಕನ ಒಂದು ವಚನವನ್ನು ಸುಶ್ರಾವ್ಯವಾಗಿ ಹಾಕಿ ಭಕ್ತಿಯರಸದಲ್ಲಿ ಮೀಯಿಸಿದರು, ನಂತರ ಪೂಜ್ಯ ಸ್ವಾಮೀಜಿಯವರು ಫಲಪುಷ್ಪ ನೀಡಿ ಶಾಲು ಹೊದಿಸಿ ಆಶೀರ್ವದಿಸಿದರು. ಸಾಮಾನ್ಯ ಶ್ರೀ ಹೆಚ್.ವಿ. ವೀರಭದ್ರಯ್ಯನವರು ಶ್ರೀಯುತರು ಕಿರು ಪರಿಚಯ ಮಾಡಿಕೊಟ್ಟು ಶ್ರೀ ಮಠದ ಪರವಾಗಿ ಸ್ವಾಗತಿಸಿದರು.

ದಿನಾಂಕ ೫.೮.೦೫ ರಂದು ಶ್ರೀ ಮಠದ ಉನ್ನತ ಪ್ರೌಢಶಾಲೆಯಲ್ಲಿ ಪ್ರತಿಭಾ ಪುರಸ್ಕಾರ ಸಮಾರಂಭ ಏರ್ಪಡಿಸಲಾಗಿತ್ತು. ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ದಿವ್ಯ ಸಾನಿಧ್ಯವಹಿಸಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ತೇರ್ಗಡೆಯಾದ ಹನ್ನೆರಡು ವಿದ್ಯಾರ್ಥಿಗಳಿಗೆ ಬಹುಮಾನವಿತ್ತು ಆಶೀರ್ವದಿಸಿ ಮಾತನಾಡುತ್ತಾ, "ನವನವೋನ್ಮೇಷ ಶಾಲಿನಿ ಪ್ರತಿಭಾ" ಎಂಬ ಉಕ್ತಿಯಂತೆ ಯಾರಲ್ಲಿ ಹೊಸ ಹೊಸ ಆಲೋಚನೆಗಳು ಹೊಳೆಯುತ್ತಾ ಹೋಗುತ್ತವೊ ಅದೇ ಪ್ರತಿಭೆ ಎನಿಸಿಕೊಳ್ಳುತ್ತದೆ. ಪ್ರತಿಭಾವಂತರು ಈ ದೇಶದಲ್ಲಿಯೆ ಇದ್ದು ದೇಶ ಸೇವೆ ಮಾಡಿ ಸಮಾಜದ ಏಳಿಗೆಗೆ ದುಡಿಯಬೇಕು. ವಿದ್ಯೆ ವಿನಯವನ್ನು ಕೊಡಬೇಕು. ಅದು ನಿಮ್ಮನ್ನು ಎತ್ತರಕ್ಕೆ ಕೊಂಡೊಯ್ಯುತ್ತದೆ. ವಿದ್ಯೆ ಕಲಿಸಿದ ಗುರುವಿನಲ್ಲಿ ಶ್ರದ್ಧಾಭಕ್ತಿ ಇರಬೇಕು ಎಂದು ಆಶಿಸಿದರು.

ಮುಖ್ಯ ಅತಿಥಿಗಳಾಗಿದ್ದ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಮಾತನಾಡುತ್ತಾ ವಿದ್ಯೆ ಎಂದರೆ "ವಿಮರ್ಶೆ ರೂಪಿಣಿ ವಿದ್ಯಾ" ವಿಮರ್ಶೆ ಮಾಡುವುದೆ ವಿದ್ಯೆ. ಅದು ನಮ್ಮಲ್ಲಿ ಆಲೋಚನಾ ಲಹರಿಯನ್ನು ಉಂಟುಮಾಡುತ್ತದೆ. ವಿದ್ಯೆ ಇಲ್ಲದವನು ಪಶುವಿಗೆ ಸಮಾನ. ಪೂಜ್ಯರು ನಮಗೆ ವಿದ್ಯೆ, ಅನ್ನ, ಆಶ್ರಯವನ್ನು ನೀಡಿದ್ದಾರೆ. ನಾವೆಲ್ಲಾ ಸದುಪಯೋಗ ಪಡಿಸಿಕೊಂಡು ಹೆಚ್ಚು ಹೆಚ್ಚು ಪ್ರತಿಭಾವಂತರಾಗಿ ಬೆಳೆಯಬೇಕು ಎಂದು ತಿಳಿಸಿದರು. ಮುಖ್ಯೋಪಾಧ್ಯಾಯರಾದ ಶ್ರೀ ಜಿ. ಗವಿಸಿದ್ಧಯ್ಯನವರು ಅಧ್ಯಕ್ಷತೆ ವಹಿಸಿದ್ದರು.

*ವರದಿ : ಡಿ.ಎಸ್. ನಾಗರಾಜು*

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೯೪೦. | ಶ್ರೀ ಚನ್ನೇಗೌಡ<br>ದೈಹಿಕ ಶಿಕ್ಷಕರು | ೧,೦೦೦.೦೦ |
| ೧೯೪೧. | ಶ್ರೀ ಗೋಪಾಲಕೃಷ್ಣ<br>ದ್ವಿ.ದ.ಸ., | ೧,೦೦೦.೦೦ |
| ೧೯೪೨. | ಶ್ರೀ ಹೆಚ್. ರಂಗಣ್ಣ<br>ದ್ವಿ.ದ.ಸ., | ೧,೦೦೦.೦೦ |
| ೧೯೪೩. | ಶ್ರೀ ಕೆ.ಪಿ. ಹೊನ್ನಪ್ಪ<br>ಪ್ರ.ಶಾ.ಸ., | ೧,೦೦೦.೦೦ |
| ೧೯೪೪. | ಶ್ರೀ ವಿ. ನಾಗಭೂಷಣ<br>ಪ್ರ.ಶಾ.ಸ., | ೧,೦೦೦.೦೦ |
| ೧೯೪೫. | ಶ್ರೀ ಟಿ.ಬಿ. ಕೆಂಚಯ್ಯ<br>ಪ್ರ.ಶಾ.ಸ., | ೧,೦೦೦.೦೦ |
| ೧೯೪೬. | ಶ್ರೀ ಬಿ.ಎಸ್. ಸಿದ್ದಲಿಂಗಯ್ಯ<br>ಪ್ರ.ಶಾ.ಸ., | ೧,೦೦೦.೦೦ |
| ೧೯೪೭. | ಶ್ರೀ ಹೆಚ್. ಕೃಷ್ಣಪ್ಪ<br>'ಡಿ' ಗ್ರೂಫ್ ನೌಕರರು | ೧,೦೦೦.೦೦ |
| ೧೯೪೮. | ಶ್ರೀ ಅಬ್ದುಲ್ ಜಲೀಲ್<br>'ಡಿ' ಗ್ರೂಫ್ ನೌಕರರು | ೧,೦೦೦.೦೦ |
| ೧೯೪೯. | ಶ್ರೀಮತಿ ಗಂಗಾಶ್ರೀ<br>'ಡಿ' ಗ್ರೂಫ್ ನೌಕರರು | ೧,೦೦೦.೦೦ |
| | ಕ್ರ.ಸಂ. ೧೯೪೦ ರಿಂದ ೧೯೪೮ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು<br>ಬಿ.ಬಿ. ರಸ್ತೆ ತುಮಕೂರು-೨. | |
| ೧೯೫೦. | ಶ್ರೀ ಎನ್. ಶಂಕರಲಿಂಗಪ್ಪ<br>ಸಹ ಶಿಕ್ಷಕರು | ೨,೦೦೦.೦೦ |
| ೧೯೫೧. | ಶ್ರೀ ಬಿ. ಪಂಚಾಕ್ಷರಯ್ಯ<br>ಸಹ ಶಿಕ್ಷಕರು | ೨,೦೦೦.೦೦ |
| ೧೯೫೨. | ಶ್ರೀ ಭೀಮಯ್ಯ<br>ಸಹಶಿಕ್ಷಕರು | ೨,೦೦೦.೦೦ |
| ೧೯೫೩. | ಶ್ರೀ ಎನ್. ಲೋಕೇಶಪ್ಪ<br>ವೃತ್ತಿ ಶಿಕ್ಷಕರು | ೨,೦೦೦.೦೦ |
| ೧೯೫೪. | ಶ್ರೀ ಕೆ.ಎಸ್. ಸರೋಜಮ್ಮ<br>ದ್ವಿ.ದ. ಸ., | ೨,೦೦೦.೦೦ |
| ೧೯೫೫. | ಶ್ರೀ ಕೆ.ಎಸ್. ಕುಮಾರಸ್ವಾಮಿ<br>ಪ್ರ.ಶಾಸ., | ೨,೦೦೦.೦೦ |
| ೧೯೫೬. | ಶ್ರೀ ಕರಿಯಪ್ಪ<br>'ಡಿ' ಗ್ರೂಫ್ ನೌಕರರು | ೨,೦೦೦.೦೦ |
| ೧೯೫೭. | ಶ್ರೀ ನಾಗರಾಜ್ಯ<br>'ಡಿ' ಗ್ರೂಫ್ ನೌಕರರು | ೨,೦೦೦.೦೦ |
| | ಕ್ರ.ಸಂ. ೧೯೫೦ ರಿಂದ ೧೯೭೨ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಂದಿಕೆರೆ, ಚಿ.ನಾ. ಹಳ್ಳಿ ತಾಲ್ಲೂಕು. | |
| ೧೯೫೮. | ಶ್ರೀ ಎಂ. ಶ್ರೀನಿವಾಸ<br>'ಡಿ' ಗ್ರೂಫ್ ನೌಕರರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ರಘುವನಹಳ್ಳಿ, ಕನಕಪುರ ರಸ್ತೆ,<br>ಬೆಂಗಳೂರು – ೫೬೦ ೦೬೨. | ೨,೦೦೧.೦೦ |
| ೧೯೫೯. | ಶ್ರೀ ಬಿ.ಸಿ. ಭಾರತಿ<br>ಕೇರಾಫ್ ಶ್ರೀಮತಿ ಶಿವಭಾಗ್ಯ<br>ನಂ. ೨೬೨, ಹೆಚ್.ಪಿ.ಜಿ. ಬಡಾವಣೆ,<br>ರಾಮ್ ಅಂಡ್ ಕಂ., ಸರ್ಕಲ್,<br>೪ನೇ ಸ್ಟೇಜ್,<br>ದಾವಣಗೆರೆ ೫೭೭೦೦೧. | ೨೫,೦೦೦.೦೦ |
| ೧೯೬೦. | ಸಿಬ್ಬಂದಿವರ್ಗದವರು ಎಸ್‌ಎಸ್‌ಇಎಸ್ (ರಿ.,)<br>೯ ಜನ ಸದಸ್ಯರು,<br>ಶ್ರೀ ಸಿದ್ಧಗಂಗಾ ಮಠ (ಟಿ.ಜಿ.ಎಸ್.,<br>ಎನ್.ಬಿ.ಜೆ., ಎನ್.ಆರ್, ಎಂ.ಎನ್.ಕೆ.,<br>ಡಿ.ಸಿ.ಎಸ್., ಸಿ.ಎಸ್.ಇ,<br>ಮತ್ತು ಎಂ.ಎಸ್) | ೪,೫೩೨.೦೦ |
| ೧೯೬೧. | ಶ್ರೀ ಬಿ. ಸಿದ್ಧಬಸವಯ್ಯ<br>ಮುಖ್ಯ ಶಿಕ್ಷಕರು | ೧,೦೦೦.೦೦ |
| ೧೯೬೨. | ಶ್ರೀ ಪುಟ್ಟಗಂಗಯ್ಯ<br>ಸಹ ಶಿಕ್ಷಕರು | ೧,೦೦೦.೦೦ |
| ೧೯೬೩. | ಶ್ರೀ ಸಿದ್ಧಗಂಗಯ್ಯ<br>ಸಹ ಶಿಕ್ಷಕರು | ೧,೦೦೦.೦೦ |
| ೧೯೬೪. | ಶ್ರೀ ರುದ್ರಪ್ರಕಾಶ್<br>ಹಿರಿಯ ಶಿಕ್ಷಕರು | ೧,೦೦೦.೦೦ |
| ೧೯೬೫. | ಶ್ರೀ ಹೆಚ್.ಬಿ. ಶಶಿಧರ<br>ಸಹ ಶಿಕ್ಷಕರು | ೧,೦೦೦.೦೦ |
| ೧೯೬೬. | ಶ್ರೀ ಬಸವರಾಜು<br>ವೃತ್ತಿ ಶಿಕ್ಷಕರು | ೧,೦೦೦.೦೦ |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೯೬೭. | ಶ್ರೀ ನಿರಂಜನಮೂರ್ತಿ<br>ದೈಹಿಕ ಶಿಕ್ಷಕರು | ೧,೦೦೦.೦೦ |
| ೧೯೬೮. | ಶ್ರೀ ಜಿ. ಗಿರಿರಾಜು<br>ದ್ವಿ.ದ.ಸ., | ೧,೦೦೦.೦೦ |
| ೧೯೬೯. | ಶ್ರೀ ಕೆ.ವಿ. ರಾಜಶೇಖರಯ್ಯ<br>ಪ್ರ.ಶಾ.ಸ., | ೧,೦೦೦.೦೦ |
| ೧೯೭೦. | ಶ್ರೀ ಬಸವರಾಜಯ್ಯ<br>ಗ್ರೂಫ್ ಡಿ ನೌಕರ | ೧,೦೦೦.೦೦ |
| | ಕ್ರ.ಸಂ. ೧೯೬೧ ರಿಂದ ೧೯೭೦ರ ವರೆಗಿನ ವಿಳಾಸ<br>ಶ್ರೀ ವೀರಭದ್ರಸ್ವಾಮಿ ಗ್ರಾಮಾಂತರ ಪ್ರೌಢಶಾಲೆ,<br>ಹರಳೂರು, ತುಮಕೂರು ತಾಲ್ಲೂಕು – ೫೭೨೧೬೮. | |
| ೧೯೭೧. | ಸಿಬ್ಬಂದಿ ವರ್ಗದವರು<br>ಶ್ರೀ ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜು<br>(೩೨ ಸದಸ್ಯರು), ಎಪಿಎಂಸಿ ಯಾರ್ಡ್,<br>ಬಟವಾಡಿ, ತುಮಕೂರು – ೩. | ೨೪,೩೮೯.೦೦ |
| ೧೯೭೨. | ಶ್ರೀ ಶಿವಲಿಂಗಯ್ಯ<br>ಪ್ರ.ಶಾ.ಸ.,<br>ಶ್ರೀ ಸಿದ್ಧಗಂಗಾ ಪ. ಪೂರ್ವ ಕಾಲೇಜು,<br>ಗುಡೇಮಾರನಹಳ್ಳಿ, ಮಾಗಡಿ ತಾ. | ೨,೦೦೧.೦೦ |
| ೧೯೭೩. | ಶ್ರೀಮತಿ ಶಾಂತಮ್ಮ ಕೋಂ.<br>ಶ್ರೀ ಕರಿಬಸಪ್ಪ ಮತ್ತು ಮಕ್ಕಳು,<br>ಕುರುಬಗೆರೆ, ಬನಶಂಕರಿ ರಸ್ತೆ,<br>ರಾಣೆಬೆನ್ನೂರು, ಹಾವೇರಿ ಜಿಲ್ಲೆ. | ೧೦,೦೦೦.೦೦ |
| ೧೯೭೪. | ಸವ್ವಕ್ಕ ಕೋಂ. ಶ್ರೀ ಬಸಪ್ಪಮುರುಡಪ್ಪ<br>ಕೊಪ್ಪಡ ಮತ್ತು ಮಕ್ಕಳು,<br>ಸೊಪ್ಪಿನಪೇಟೆ, ಕುರುಬಗು,<br>ರಾಣೆಬೆನ್ನೂರು, ಹಾವೇರಿ ಜಿಲ್ಲೆ. | ೨,೦೦೧.೦೦ |
| ೧೯೭೫. | ಶ್ರೀ ಆರ್.ಹೆಚ್. ಮೋಹನ್‌ಕುಮಾರ್<br>ಸಹ ಶಿಕ್ಷಕರು | ೨,೨೫೧.೦೦ |
| ೧೯೭೬. | ಶ್ರೀಮತಿ ಎಸ್. ವನಜಾಕ್ಷಮ್ಮ<br>ಹಿರಿಯ ಶಿಕ್ಷಕರು | ೨೨೫೧.೦೦ |
| ೧೯೭೭. | ಶ್ರೀ ಟಿ.ಎಸ್. ರಮೇಶ್<br>ಸಹ ಶಿಕ್ಷಕರು | ೨,೨೫೧.೦೦ |
| ೧೯೭೮. | ಶ್ರೀ ಎಸ್.ಜಿ. ಜಯಣ್ಣ<br>ಸಹ ಶಿಕ್ಷಕರು | ೨,೨೫೧.೦೦ |
| ೧೯೭೯. | ಶ್ರೀ ಎಸ್. ರಮೇಶ್<br>ಸಹ ಶಿಕ್ಷಕರು | ೨,೦೦೧.೦೦ |
| ೧೯೮೦. | ಶ್ರೀ ಜಿ. ಕೃಷ್ಣಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೯೭೫ ರಿಂದ ೧೯೮೦ರ ವರೆಗಿನ ವಿಳಾಸ<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಹಿರಿಯ ಪ್ರಾಥಮಿಕ ಶಾಲೆ,<br>ಶ್ರೀ ಸಿದ್ಧಗಂಗಾಮಠ, ತುಮಕೂರು ತಾಲ್ಲೂಕು – ೫೭೨ ೧೦೪. | |
| ೧೯೮೧. | ಶ್ರೀ ಬಿ.ಎಸ್. ಜಯಪ್ರಭು<br>ಸಹ ಶಿಕ್ಷಕರು | ೧,೦೦೦.೦೦ |
| ೧೯೮೨. | ಶ್ರೀ ಕೆ.ಎನ್. ನರಸಿಂಹಮೂರ್ತಿ<br>ಸಹ ಶಿಕ್ಷಕರು | ೨,೦೦೦.೦೦ |
| ೧೯೮೩. | ಶ್ರೀ ಎಸ್. ನಾರಾಯಣಸ್ವಾಮಿ<br>ವೃತ್ತಿ ಶಿಕ್ಷಕರು | ೧,೦೦೦.೦೦ |
| ೧೯೮೪. | ಶ್ರೀ ಹೆಚ್.ಆರ್. ಕೇಶವಯ್ಯಂಗಾರ್<br>ಸಹ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೧೯೯೧ ರಿಂದ ೧೯೮೪ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಹೆಡಕನಹಳ್ಳಿ, ಹೊಸಕೋಟೆ ತಾಲ್ಲೂಕು. | |
| ೧೯೮೫. | ಕು. ಬಿ.ಕೆ. ಜಯಶ್ರೀ<br>ಆಂಗ್ಲಭಾಷಾ ಉಪನ್ಯಾಸಕರು,<br>ಶ್ರೀ ಸಿದ್ಧಗಂಗಾ ಪ.ಪೂ. ಕಾಲೇಜು,<br>ಬಿ.ಹೆಚ್. ರಸ್ತೆ ತುಮಕೂರು-೨. | |
| ೧೯೮೬. | ಶ್ರೀಮತಿ ನಾಗಲಿಂಗಮ್ಮ ಕೋಂ.<br>ಗೌಡಿಕೆ ಮಹದೇವಪ್ಪ ಮತ್ತು ಮಕ್ಕಳು<br>ಬೇಡರಪುರ, ಚಾಮರಾಜನಗರ ತಾಲ್ಲೂಕು<br>ಮತ್ತು ಜಿಲ್ಲೆ. | ೨,೦೦೧.೦೦ |
| ೧೯೮೭. | ಶ್ರೀ ಕೆ. ವೀರಪ್ಪ ಬಿನ್ ಕೆ. ನಾಗಪ್ಪ<br>ಕೆಂಚಮ್ಮನಹಳ್ಳಿ, ಎಂ. ಕಲ್ಲಹಳ್ಳಿ ಅಂಚೆ,<br>ಹೂವಿನಹಡಗಲಿ ತಾಲ್ಲೂಕು,<br>ಬಳ್ಳಾರಿ ಜಿಲ್ಲೆ. | ೨,೦೦೧.೦೦ |
| ೧೯೮೮. | ಶ್ರೀಮತಿ ಎಸ್. ಶಶಿಕಲ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಹಿರಿಯ ಪ್ರಾಥಮಿಕ ಶಾಲೆ,<br>ಶಿವನಹಳ್ಳಿ, ಬೆಂಗಳೂರು – ೧೦. | ೨,೦೦೧.೦೦ |
| ೧೯೮೯. | ಶ್ರೀ ಗುಡಿಸದಾಶಿವಪ್ಪ<br>ನಿವೃತ್ತಿ ಶಿಕ್ಷಕರು,<br>ಅರಳೀಕೆರೆ ಅಟ್ ಅಂಡ್ ಪೋಸ್ಟ್,<br>ಕಸಬಾ ಹೋಬಳಿ, ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೧.೦೦ |

*(ಮುಂದುವರೆಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೩೮. | ಶ್ರೀ ಗಂಗಾಧರಪ್ಪ<br>ಸಹ ಶಿಕ್ಷಕರು | ೧,೦೦೦.೦೦ |
| ೧೪೩೯. | ಶ್ರೀಮತಿ ಹೆಚ್.ಎಸ್. ಪಂಕಜ<br>ಸಹ ಶಿಕ್ಷಕರು | ೧,೦೦೦.೦೦ |
| ೧೪೪೦. | ಶ್ರೀ ಜಯಣ್ಣ<br>ಸಹ ಶಿಕ್ಷಕರು | ೧,೦೦೦.೦೦ |
| ೧೪೪೧. | ಶ್ರೀ ಟಿ. ರಮೇಶ್<br>ದೈಹಿಕ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೧೪೩೮ ರಿಂದ ೧೪೪೧ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಸಂ. ಪ. ಪೂರ್ವ ಕಾಲೇಜು,<br>ಬೂದಿಗೆರೆ ದೇವನಹಳ್ಳಿ ತಾಲ್ಲೂಕು. | |
| ೧೪೪೨. | ಶ್ರೀ ಜಿ. ಕುಮಾರ್<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಹಿರೇಹಳ್ಳಿ, ತುಮಕೂರು ತಾ. | ೧,೦೦೦.೦೦ |
| ೧೪೪೩. | ಶ್ರೀ ಎನ್. ಹನುಮಂತರಾಯ<br>ದೈಹಿಕ ಶಿಕ್ಷಕರು,<br>ಶ್ರೀಬಸವೇಶ್ವರ ಗ್ರಾ. ಪ್ರೌಢಶಾಲೆ,<br>ತೋಟಗೆರೆ,<br>ಬೆಂಗಳೂರು ಉ. ತಾ. ೫೬೨ ೧೨೩. | ೧,೦೦೧.೦೦ |
| ೧೪೪೪. | ಶ್ರೀ ಬಿ.ಎಸ್. ಪಾಲನೇತ್ರ<br>ದೈಹಿಕ ಶಿಕ್ಷಕರು,<br>ಶ್ರೀಬಸವೇಶ್ವರ ಗ್ರಾ. ಪ್ರೌಢಶಾಲೆ,<br>ತೋಟಗೆರೆ, ದಾಸನಪುರ ಹೋಬಳಿ,<br>ಬೆಂಗಳೂರು ಉತ್ತರ - ೫೬೨ ೧೨೩. | ೧,೦೦೧.೦೦ |
| ೧೪೪೫. | ಶ್ರೀ ಎಂ. ಆನಂದ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ.ಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ),<br>ಹಾಲನೂರು, ತುಮಕೂರು ತಾ. | ೧,೦೦೦.೦೦ |
| ೧೪೪೬. | ಶ್ರೀ ಜಿ. ಕರಿಸಿದ್ಧಯ್ಯ<br>ನಿವೃತ್ತ ತಹಶೀಲ್ದಾರ್,<br>ರೈಲ್ವೇ ಸ್ಟೇಷನ್ ರಸ್ತೆ, ತಿಪಟೂರು,<br>ತುಮಕೂರು ಜಿಲ್ಲೆ. | ೧,೦೦೫.೦೦ |
| ೧೪೪೭. | ಶ್ರೀ ರುದ್ರಸ್ವಾಮಿ<br>ಮುಖ್ಯೋಪಾಧ್ಯಾಯರು,<br>ಶ್ರೀ ತೋಂಟದಾರ್ಯ ಸಂಸ್ಕೃತ ಪಾಠಶಾಲೆ,<br>ಕಂಚುಗಲ್ ಬಂಡೇಮಠ, ಮಾಗಡಿ ತಾ.<br>ಬೆಂ. ಗ್ರಾ. ಜಿಲ್ಲೆ– ೫೬೨ ೧೨೭. | ೧,೦೦೦.೦೦ |
| ೧೪೪೮. | ಶ್ರೀ ಎಸ್.ಜಿ. ರಾಜು<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಪುರುಷನಹಳ್ಳಿ, ಡಿ.ಬಿ. ಪುರ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ. | ೧,೦೦೧.೦೦ |
| ೧೪೪೯. | ಶ್ರೀ ಬಿ.ಎಸ್. ಸಿದ್ಧರಂಗಯ್ಯ<br>ದ್ವಿದಸ.,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಅದಲಗೆರೆ, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೦.೦೦ |
| ೧೪೫೦. | ಶ್ರೀಮತಿ ಹೆಚ್.ಎಲ್. ಲಲಿತಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೧೪೫೧. | ಶ್ರೀ ಪಾಲಾಕ್ಷ<br>ದೈಹಿಕ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೧೪೫೦ ರಿಂದ ೧೪೫೧ರ ವರೆಗಿನ ವಿಳಾಸ<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಉನ್ನತ ಪ್ರೌಢಶಾಲೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು-೪. | |
| ೧೪೫೨. | ಶ್ರೀ ಬಿ.ಆರ್. ಜಗದೀಶಯ್ಯ<br>ಪ್ರಾಂಶುಪಾಲರು | ೧,೦೦೧.೦೦ |
| ೧೪೫೩. | ಶ್ರೀ ಕೆ.ಬಿ. ಬಸವರಾಜು<br>ಜೆ.ಟಿ.ಓ. | |
| | ಕ್ರ.ಸಂ. ೧೪೫೨ ರಿಂದ ೧೪೫೩ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆ, ಕುಂಚಗಲ್ ಬಂಡೇಮಠ,<br>ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ. | |

*(ಮುಂದುವರೆಯುತ್ತದೆ)*



ಪರಮಪೂಜ್ಯರಿಂದ ಎಸ್.ಐ.ಟಿ.ಯಲ್ಲಿ ಟ್ರೈನಿಂಗ್ ಅಂಡ್ ಪ್ಲೇಸ್‌ಮೆಂಟ್ ವಿಭಾಗದ ನೂತನ ಕಟ್ಟಡದ ಉದ್ಘಾಟನೆ. ಉಪ ಪ್ರಾಂಶುಪಾಲ ಪ್ರೊ. ಬಸವರಾಜಯ್ಯ, ಪ್ರಾಂಶುಪಾಲ ಡಾ. ಎಂ.ಎನ್. ಚನ್ನಬಸಪ್ಪ, ಪ್ರೊ. ಶಶಿಧರ್, ಡಾ. ಎಂ.ಎನ್. ಚಂದ್ರಶೇಖರಯ್ಯ ಹಾಜರಿದ್ದರು




ಪರಮಪೂಜ್ಯರಿಂದ ಸಿದ್ಧಗಂಗಾ ಫಾರ್ಮಸಿ ಕಾಲೇಜಿನ ವಾರ್ಷಿಕ ಸಮಾರಂಭ ಉದ್ಘಾಟನೆ. ರಾ.ಗಾಂಧಿ ವಿ.ವಿ. ಕುಲಪತಿ ಡಾ. ಎಸ್. ಪ್ರಭಾಕರನ್, ಪ್ರಾಂ. ಡೇವಿಡ್ ಬಾನ್ಜಿ, ಶ್ರೀ ಎಂ. ರವಿ, ಶ್ರೀ ಕೆ.ಎಂ. ರಘುನಾಥ್, ಶ್ರೀ ಪಿ. ರಮೇಶ್ ಉಪಸ್ಥಿತರಿದ್ದರು



ಸಿದ್ಧಗಂಗಾ ಬಾಲಕರ ಪದವಿ ಕಾಲೇಜಿನ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಸ್ವಾಗತ ಸಮಾರಂಭ. ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರಾಂಶುಪಾಲ ಎಂ.ಬಿ. ಸದಾಶಿವಯ್ಯ ಡಾ. ನಾಗಭೂಷಣ, ಡಾ. ಎಂ.ಪಿ. ಶಂಕರಪ್ಪ ಉಪಸ್ಥಿತರಿದ್ದರು



ಸಚಿವ ಶ್ರೀ ಸತ್ಯನಾರಾಯಣ ಅವರಿಂದ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಸ್ಪಂದನ–ಸಮಾರಂಭ ಉದ್ಘಾಟನೆ. ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಶ್ರೀ ಜೆ. ರೇಣುಕಪ್ಪ, ಶ್ರೀಮತಿ ಅರುಂಧತಿನಾಗ್, ಶ್ರೀ ಎಸ್.ಜೆ. ಸಿದ್ಧರಾಮಯ್ಯ ಅಧ್ಯಕ್ಷರು, ಕ.ಪು.ಪ್ರಾ. ಉಪಸ್ಥಿತರಿದ್ದರು



ತುಮಕೂರಿನಲ್ಲಿ ಶ್ರೀ ಘನಮಠದ ನಾಗಭೂಷಣ ಶಿವಯೋಗಿಗಳ ಪುರಾಣ ಪ್ರವಚನವನ್ನು ಸಿದ್ಧಗಂಗಾ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉದ್ಘಾಟಿಸಿದರು. ಚಿಕ್ಕತೊಟ್ಲುಕೆರೆ ಶ್ರೀ ಅಟವೀ ಶಿವಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು



ತುಮಕೂರು ತಾಲ್ಲೂಕು ಮಲ್ಲಪ್ಪನಹಳ್ಳಿ ಗ್ರಾಮದಲ್ಲಿ ಲಿಂಗೈಕ್ಯ ಹೊಸಳ್ಳಪ್ಪ ದಂಪತಿಗಳ ಸ್ಮರಣಾರ್ಥ ಶರಣ ಮೇಳ ಸಮಾರಂಭವನ್ನು ಸಿದ್ಧಗಂಗಾ ಕಿರಿಯ ಶ್ರೀಗಳವರು ಉದ್ಘಾಟಿಸಿದರು. ಮಾಕನಹಳ್ಳಿ ಮಠದ ಶ್ರೀ ಗಂಗಧಾರ ಸ್ವಾಮಿಗಳು, ಶ್ರೀ ಹೆಚ್.ವಿ. ವೀರಭದ್ರಯ್ಯ ಶ್ರೀ ಕೆ. ಶಂಕರಪ್ಪ, ಶ್ರೀ ಡಿ.ಎಸ್. ರೇಣುಕಾರಾಧ್ಯ ಶ್ರೀ ರಾಜಶೇಖರಯ್ಯ ಉಪಸ್ಥಿತರಿದ್ದರು.

Printed at: Geetanjali Graphics #4, M.S.R. Indl Estate, Bangalore - 54. Ph: 23604087